ಮುಂಬಯಿ ಕರ್ನಾಟಕ ಸಂಘ ಪ್ರಕಾಶನ

ಶ್ರೀರಂಗ ಸಾರಸ್ವತ : ೮

KARNATAK ... No ... DHARWAR

# ಜರಾಸಂಧಿ

( ಸಾಮಾಜಿಕ ನಾಟಕ )

ಶ್ರೀರಂಗ




ಆಗಸ್ಟ ೧೯೪೮

ಬೆಲೆ ೧-೮-೦

## ಪ್ರಕಾಶನ ಸಮಿತಿ

ಅಧ್ಯಕ್ಷ

**ರಾವಬಹಾದ್ದೂರ ಶ್ರೀ ಕೆ. ಬಿ. ಭದ್ರಾಪುರ**

ಸದಸ್ಯರು

**ಶ್ರೀ ಎಚ್. ಎಸ್. ಪಾಟೀಲ** **ಶ್ರೀ ಸಾಂಗಲಿ ವೆಂಕಟೇಶ**

ಕಾರ್ಯದರ್ಶಿ

**ಶ್ರೀ ವರದರಾಜ ಆದ್ಯ**

೧. ಈ ನಾಟಕದ ಈ ಆವೃತ್ತಿಯ ಎಲ್ಲ ಅಧಿಕಾರಗಳು ಕಾಯ್ದಿರಿಸಲ್ಪಟ್ಟಿವೆ.

೨. ಈ ನಾಟಕದ ಮುಂದಿನ ಆವೃತ್ತಿಗಳ ಎಲ್ಲ ಅಧಿಕಾರಗಳು ಶ್ರೀಮತಿ ಶಾರದಾದೇವಿ ಜಾಗಿರದಾರ ಅವರಿಗೆ ಸೇರಿವೆ.

೩. ಈ ನಾಟಕವನ್ನು ಅಭಿನಯಿಸಲಿಚ್ಛಿಸುವವರು ಶ್ರೀಮತಿ ಶಾರದಾದೇವಿ ಜಾಗಿರದಾರ ಅವರಿಗೆ ೨೫ ರೂ. ಗಳ ಗೌರವಧನವನ್ನು ಕಳಿಸಿ ಮುಂಚಿತ ಅಪ್ಪಣೆಯನ್ನು ಪಡೆಯಬೇಕು.

ಪ್ರಥಮ ಮುದ್ರಣ :- ೧೦೦೦ ಪ್ರತಿಗಳು.
೧೫ನೆಯ ಆಗಸ್ಟ ೧೯೪೮

ಪ್ರಕಾಶಕರು

**ಕರ್ನಾಟಕ ಸಂಘ**

ಸಂಧುಗಿರಿ ಸದನ, ಮುಂಬಯಿ ೪

ಮುದ್ರಕರು

**ಶ್ರೀ ಎಸ್. ಎಮ್. ಕುಲಕರ್ಣಿ**

ಲಲಿತ ಮುದ್ರಣಾಲಯ, ಧಾರವಾಡ

# ನಿವೇದನ

ಮುಂಬಯಿ ಕರ್ನಾಟಕ ಸಂಘದ ಮೂರನೆಯ ಪ್ರಕಟನೆಯನ್ನು ಕನ್ನಡಿಗರ ಕೈಯಲ್ಲಿ ಇಡುವಾಗ ನಮಗೆ ಬಹಳ ಸಂತೋಷವಾಗುತ್ತಿದೆ ನಮ್ಮ ಸಂಘದ ಮೊದಲನೆಯ ಎರಡು ಪ್ರಕಟನೆಗಳಿಗೆ ಕನ್ನಡಿಗರು ಕೊಟ್ಟ ಪ್ರೋತ್ಸಾಹನದ ಫಲವೆ ಇದು.

ನಾಟಕವು ಸಮಾಜದ ಜಾಗೃತಿಯನ್ನು ಮಾಡಲು ಅತ್ಯಂತ ಪ್ರಭಾವಿಯಾದ ಸಾಧನವು. ಶ್ರೀರಂಗರ ನಾಟಕಗಳು ಈ ಕಾರ್ಯದಲ್ಲಿ ಎಷ್ಟು ಯಶಸ್ವಿಯಾಗಿರುವವೆಂಬುದನ್ನು ಕನ್ನಡಿಗರು ಬಲ್ಲರು. ಶ್ರೀರಂಗರ ಪ್ರಸ್ತುತ ನಾಟಕವು ಈ ಒಂದು ದೃಷ್ಟಿಯಿಂದ ಉಪಯುಕ್ತವಾಗಿದೆಯಷ್ಟೆ ಅಲ್ಲದೆ ನಮ್ಮ ಸ್ವಾತಂತ್ರ್ಯ ಆಂದೋಲನದ ಚರಿತ್ರೆಯೂ ಆಗಿರುವದೊಂದು ಅದರ ವೈಶಿಷ್ಟ್ಯವಾಗಿದೆ.

ಅಂತಹ ತಮ್ಮ ನಾಟಕವನ್ನು ನಮ್ಮ ಸಂಘದ ಪರವಾಗಿ ಪ್ರಕಟಿಸಲು ಶ್ರೀರಂಗರು ಅನುಮತಿಯನ್ನಿತ್ತು ಉಪಕಾರ ಮಾಡಿದ್ದಾರೆ. ನಾವು ಪ್ರಕಾಶನ ಕಾರ್ಯವನ್ನು ಕೈಕೊಂಡನಂತರ ಅಲ್ಪಾವಧಿಯಲ್ಲಿಯೆ ಶ್ರೀರಂಗರ ನಾಟಕವನ್ನು ಪ್ರಕಟಿಸುವ ಸುಯೋಗವು ಬಂದದ್ದರಿಂದ ನಮಗೆ ಬಹಳ ಅಭಿಮಾನವೆನಿಸುತ್ತದೆ.

ಗೆಳೆಯರಾದ ಪ್ರೊ. ವಿ. ಎಂ. ಇನಾಂದಾರರು ಅಚ್ಚಿನ ಕರಡುಗಳನ್ನು ತಿದ್ದಿ ನೆರವಾಗಿದ್ದಾರೆ. ಶ್ರೀ ಎಚ್. ಎಸ್. ಪಾಟೀಲರು ಅನೇಕ ಸಲಹೆ-ಸೂಚನೆಗಳನ್ನು ಕೊಟ್ಟಿದ್ದಾರೆ. ಧಾರವಾಡದ ಲಲಿತ ಮುದ್ರಣಾಲಯದವರು ಅಲ್ಪ ಅವಧಿಯಲ್ಲಿಯೆ ಅಂದವಾಗಿ ಅಚ್ಚು ಹಾಕಿದ್ದಾರೆ. ಇವರೆಲ್ಲರಿಗೂ ಅಭಿನಂದನೆಗಳನ್ನು ಸಲ್ಲಿಸುತ್ತೇವೆ.

೧೫-೮-೧೯೪೮
ಕರ್ನಾಟಕ ಸಂಘ
ಗಿರಗಾವ, ಮುಂಬಯಿ ೪

**ವರದರಾಜ ಆದ್ಯ**
ಗೌರವ ಕಾರ್ಯದರ್ಶಿ,
ಪ್ರಕಾಶನ ಸಮಿತಿ

# ಮುನ್ನುಡಿ

'ಜರಾಸಂಧಿ' ನಾಟಕವನ್ನು ಪ್ರಾರಂಭಿಸಿ, ಒಂದು ವರ್ಷದವರೆಗೆ ನಡುವೆ ಅದನ್ನು ಹಾಗೆಯೆ ಅರ್ಧಕ್ಕೆ ಬಿಟ್ಟುಕೊಟ್ಟು, ಈ ಕೆಲವು ತಿಂಗಳ ಹಿಂದೆ ಮುಗಿಸಿದೆ. ಈ ಕಾರಣಕ್ಕಾಗಿಯೆ ಒಂದೆರಡು ಮಾತುಗಳನ್ನಿಲ್ಲಿ ಬರೆಯಬೇಕಾಗಿದೆ. (ಇಲ್ಲವಾದರೆ ಇಡಿಯ ನಾಟಕವನ್ನು ಬರೆದವನಿಗೆ ಮುನ್ನುಡಿ ಎಂದು ಮತ್ತೂ ಬರೆಯಲು ಕಾರಣವಾಗಲಿ ವಸ್ತುವಾಗಲಿ ಇರುವದಿಲ್ಲ ಎಂದು ನನ್ನ ಗ್ರಹಿಕೆ.) 'ಜರಾಸಂಧಿ'ಯನ್ನು ಪ್ರಾರಂಭಿಸಿದ್ದು ಸ್ವಾತಂತ್ರ್ಯದ ಮುಂಚೆ; ಮುಗಿಸಿದ್ದು ಸ್ವಾತಂತ್ರ್ಯದ ತರುವಾಯ. ಹೀಗಿದ್ದರೂ ಮುಂಚೆ ಬರೆದಿಟ್ಟ ಕಾಲದಲ್ಲಿ ಎರಡೇ ಕಡೆ ವಾಕ್ಯದ ಕ್ರಿಯಾಪದವನ್ನು ವರ್ತಮಾನ ಕಾಲದಿಂದ ಭೂತಕಾಲಕ್ಕೆ ಬದಲಾಯಿಸಿದೆಯಲ್ಲದೆ ಬೇರೆ ಯಾವ ಬದಲಾವಣೆಯೂ ಇಲ್ಲ. ಓದಿ ನೋಡಿದಾಗ ಅದರ ಅಗತ್ಯವೂ ನನಗೆ ಕಂಡು ಬರಲಿಲ್ಲ. ಈ ಮಾತನ್ನು ಓದುಗರು—ವಿಶೇಷವಾಗಿ ವಿಮರ್ಶಕರು—ಲಕ್ಷ್ಯದಲ್ಲಿಡಬೇಕೆಂದು ನನ್ನ ಸೂಚನೆ.

ನಾಟಕದಲ್ಲಿಯ ಪಾತ್ರಗಳು ವ್ಯವಹಾರದಲ್ಲಿಯ ವ್ಯಕ್ತಿಗಳಿಂದಲೇ ಸೂಚಿತವಾಗಿದ್ದುದು ಅನಿವಾರ್ಯವಾದರೂ ಯಾವ ಪಾತ್ರವೂ ವ್ಯವಹಾರದೊಳಗಿನ ಒಂದೇ ಒಂದು ವ್ಯಕ್ತಿಯ ಚಿತ್ರವಲ್ಲ. ಸ್ವಲ್ಪಾವಧಿಯಲ್ಲಿಯೆ ಪ್ರಯೋಗಿಸಲ್ಪಡುವ ನಾಟಕದಲ್ಲಿ ಹೀಗೆ ಮಾಡುವದು ಶಕ್ಯವೂ ಅಲ್ಲ; ಸಾಧಕವೂ ಅಲ್ಲ. ಆದರೆ ನಾಟಕದಲ್ಲಿ ಕಂಡು ಬರುವ 'ವಾತಾವರಣ'ವು, ದೇಶದಲ್ಲಿ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಕಂಡುಬರುವ ಬದಲಾವಣೆಯ ಚಿತ್ರವು–ಇವೆರಡು ಮಾತ್ರ ನನ್ನ ದೃಷ್ಟಿಯಿಂದ ಇಂದಿನ ಕಾಲಕ್ಕೆ ಸರಿಯಾಗಿವೆ ಎಂದೆನ್ನಿಸಿದೆ.

‘ವಾತಾವರಣ’ ಎಂಬ ಶಬ್ದವನ್ನುಪಯೋಗಿಸಿದ ನಿಮಿತ್ತಕ್ಕಾಗಿ ಒಂದೆರಡು ಮಾತುಗಳನ್ನು ಹೇಳುವುದು ಅನಿವಾರ್ಯವಾಗುವುದು. ಯಾವುದಾದರೊಂದು ಹೊಸ ರೀತಿಯನ್ನು ಮೊದಲ ಸಲ ಪ್ರಯೋಗದಲ್ಲಿ ತರುವ ಲೇಖಕನ ಹಣೆಬರೆಹ ಕನಿಕರಪಡುವಂತಹುದು. ಈ ನಾಟಕದಲ್ಲಿ ಕತೆ ಇಲ್ಲ, ಆದರೂ ಚರಿತ್ರೆ ಇದೆ; ಘಟನೆಗಳೆ ಇಲ್ಲ, ಆದರೂ ಕೊನೆ ಇದೆ. ಮಾತಿನ ಹೊರತಾಗಿ ಮತ್ತೊಂದಿಲ್ಲ ಎಂದು ಓದುವಾಗ ತೋರಿದರೂ ನೋಡುವಾಗ ಏನೊ ನಡೆಯುತ್ತಿದೆ ಎಂದು ಭಾಸವಾಗಬಹುದಾಗಿದೆ. ಈ ನಾಟಕದ ಯಶಸ್ಸಿಗಾಗಿ ಈ ರೀತಿ ಅನಿವಾರ್ಯ. ಬ್ರಿಟಿಶರ ಆಳಿಕೆಯನ್ನು ಸಂತೋಷದಿಂದ ಒಪ್ಪಿ ನಡೆಸಿಕೊಂಡು ಹೋಗುವ ೬೦ ವರುಷಗಳ ಹಿಂದಿನ ಕಾಲದಿಂದ, ಬ್ರಿಟಿಶರ ಶಿಕ್ಷಣದಿಂದ ತರಬೇತಾದ ಬುದ್ಧಿಜೀವಿಗಳ ೩೦ ವರುಷಗಳ ಹಿಂದಿನ ಕಾಲವನ್ನು ದಾಟಿ, ಬ್ರಿಟಿಶರನ್ನು ದೇಶಾಭಿಮಾನದಿಂದ ಇದಿರಿಸುವ ಶಕ್ತಿಯ ೩೦ ವರ್ಷಗಳ ಈಚಿನ ಕಾಲದ ವರೆಗೆ ಪಾಂಡಪ್ಪ, ಬಿಂದೂರಾಯ, ಮಂದಾಕಿನೀ ಈ ಮುವ್ವರು ಅನುಕ್ರಮವಾಗಿ ಮೂರು ಐತಿಹಾಸಿಕ ವಾತಾವರಣದ ಪ್ರತಿನಿಧಿಯಾಗಿದ್ದಾರೆ. ಮಿಕ್ಕ ಪಾತ್ರಗಳು ಯಾವ ಕಾಲದಲ್ಲಾದರೂ ಕಂಡುಬರಬಹುದು ಸಾಮಾನ್ಯ ಮಾನವನ ಪ್ರತೀಕಗಳು.

ಈ ನಾಟಕವು ಇನ್ನೂ ರಂಗಭೂಮಿಯಲ್ಲಿ ಪ್ರಯೋಗಿಸಲ್ಪಟ್ಟಿಲ್ಲ; ಆದ್ದರಿಂದ ಜನರಿಗೆ ಅದರ ಅರ್ಥ ಆಗುವದೆ ಇಲ್ಲವೆ ಎಂಬುದನ್ನು ಹೇಳಲು ಶಕ್ಯವಿಲ್ಲ. ಅರ್ಥವಾದಲ್ಲಿ ಮಾತ್ರ ಸಾಮಾನ್ಯ ಜನತೆಯು ಬೌದ್ಧಿಕ ಪ್ರಗತಿಯನ್ನು ಹೊಂದಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು.

ಸ್ವಾತಂತ್ರ್ಯ ಸಾಧನೆಯ ತರುವಾಯ ಮುಗಿಯಲು ಹುಟ್ಟಿದ ಈ ನಾಟಕ ನಾಟಕಕಾರನಿಗೂ ಸ್ವಾತಂತ್ರ್ಯವನ್ನು ತಂದು ಕೊಡುವಂತಹದಾಗಿದೆ. ಆದಕಾಗಿ ‘ಜರಾಸಂಧಿ’ ನಿಜವಾಗಿಯೆ ಕಲಾಸಂಧಿಯಾಗಬಹುದಾಗಿದೆ—ಸಾರ್ವಜನಿಕರ ಉತ್ತೇಜನ ದೊರೆತರೆ ಮಾತ್ರ.

ಈ ನಾಟಕವನ್ನು ಪ್ರಕಟಮಾಡುವದಕ್ಕೆ ಮುಂಬಯಿ ಕರ್ನಾಟಕ ಸಂಘದವರು ಮುಂದೆ ಬಂದುದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ.

೨೮–೭–೧೯೪೮ ಶ್ರೀರಂಗ

## ಪಾತ್ರಪರಿಚಯ

( ಪ್ರವೇಶದ ಅನುಕ್ರಮದಲ್ಲಿ )

೧ ಮಿಸ್ ಮಂದಾ ( ಮಂದಾಕಿನಿ ) ೨೫ ವಯಸ್ಸು

( ಪಾಂಡಪ್ಪನವರ ಮೊಮ್ಮಗಳು. ಬಿಂದೂರಾಯನ ಮಗಳು )

೨ ಚಾಕರಿಯ ಚೆನ್ನ

೩ ಅಡಿಗೆಯ ಅನಂತ

೪ ಬರೆಯುವ ಬಿಂದೂರಾಯ ( ಪಾಂಡಪ್ಪನವರ ಮಗ ) ೪೮ ವಯಸ್ಸು

೫ ಶ್ರೀಯುತ ಸುಬ್ಬಣ್ಣ ( ತರುಣ ವಕೀಲ ) ೩೬ ,,

೬ ಪಿತ್ತದ ಪಾಂಡಪ್ಪನವರು ೬೮ ,,

ಕಾಲ : ಇಂದಿನದು

ಸ್ಥಳ : ಪಾಂಡಪ್ಪನವರ ಸ್ವಂತದ ಮನೆ

# ಜರಾಸಂಧಿ

## ಅಂಕ ೧

[ ಪಾಂಡಪ್ಪನವರ ಮನೆಯ ಮುಂಗೋಣೆ. ಪ್ರೇಕ್ಷಕರ ಇದಿರಿಗೆ ರಂಗದ ಮಧ್ಯದಲ್ಲಿ ತಲೆಬಾಗಿಲು ಕಾಣುವದು. ರಂಗಭೂಮಿಯಲ್ಲಿ ಕಾಣುವದು ಕೋಣೆಯ ಒಳಭಾಗ ಎಂಬುದು ತಲೆಬಾಗಿಲಿನ ಆಚೆಗೆ ಕಾಣುವ ಪಾವಟಿಗೆ, ಮುಂದೆ ತೋಟದ ಒಂದು ಭಾಗ, ತುಸು ದೂರದಲ್ಲಿ ಅಸ್ಪಷ್ಟವಾಗಿ ಅಲ್ಲಲ್ಲಿ ಕಾಣುವ ಮನೆ-ಗಿಡಗಳು— ಇದರಿಂದ ಸ್ಪಷ್ಟವಾಗುವದು. ಮುಂಬಾಗಿಲಿನ ಎಡಬಲ ಗೋಡೆಯ ಭಾಗವೆಲ್ಲ ಹೆಚ್ಚಾಗಿ ಸಿಮೆಂಟಿನ ಚೌಕ ಸಂದುಗಳಿಂದಲೆ ತುಂಬಿದೆ. ಒಂದು ವಿಶೇಷವೆಂದರೆ ಈ ಸಂದುಗಳಿದ್ದಲ್ಲಿ ಒಳಬದಿಗೆ, ನೆಲದಿಂದ ಸುಮಾರು ೨–೩ ಅಡಿ ಎತ್ತರಕ್ಕೆ ಗೋಡೆಯನ್ನು ಆತು ಕೂಡಲು ಅನುಕೂಲವಾಗುವಂತೆ, ಆಸನದಂತೆ ಹೆಚ್ಚು ಅಗಲವಾಗಿರಿಸಿದೆ. ರಂಗಭೂಮಿಯಲ್ಲಿ ಕಾಣುವ ಕೋಣೆಯ ಭಾಗವು ಅತ್ಯಂತ ಅಚ್ಚುಕಟ್ಟಿನಿಂದ ಮೆರೆಯುತ್ತಿದೆ. ಗೋಡೆಗುಂಟಲೂ ಅಲ್ಲಲ್ಲಿ ಸುಂದರ ಪಚ್ಚಸ್ನ ಗಿಡಬಳ್ಳಿಗಳ ಭಾಂಡಗಳಿವೆ. ಮುಂಬಾಗಿಲಿನ ತಲೆಯಮೇಲೆ ಒಂದು ದೊಡ್ಡ ಗಡಿಯಾರ.

ಮಧ್ಯಾಹ್ನದ ನಾಲ್ಕೂವರೆ ಗಂಟೆಯಾಗಿದೆ.

ಮಧ್ಯದಲ್ಲಿ ಒಂದು ಹರವಾದ ಮೇಜು. ಅದರ ಸುತ್ತಲೂ ಮೆತ್ತನ್ನ ಆಸನದ ಪ್ರಶಸ್ತ ಕುರ್ಚಿಗಳು. (ಪ್ರೇಕ್ಷಕರ) ಎಡಬದಿಗೆ ಪಾವಟಿಗೆಗಳು ಕಂಡು ಬಂದು, ಅಟ್ಟಕ್ಕೆ ಏರುವ ದಾರಿ ಇದಾಗಿದೆ. (ಪ್ರೇಕ್ಷಕರ) ಬಲಬದಿಗೆ ಒಳಗೆ ಹೋಗುವ ಬಾಗಿಲು. ಪರದೆ ತೂಗುಬಿಟ್ಟದ್ದರಿಂದ ಒಳಗೆ ಏನೂ ಕಾಣುವಂತಿಲ್ಲ.

ತೆರೆಯು ಮೇಲೆದ್ದಾಗ ಮಂದಾಕಿನಿಯು ಮೇಜಿನ ಮೇಲೆ ತರತರದ ಗಾಜಿನ ಪಾತ್ರೆಗಳಲ್ಲಿ ಚಹದ ವೇಳೆಗೆ ಬೇಕಾಗುವ ತಿನಿಸುಗಳನ್ನು ಓರಣದಿಂದ ಇಡುತ್ತಲಿದ್ದಾಳೆ. ಮಂದಾಕಿನಿಯ ವಯಸ್ಸು ಸುಮಾರು ೨೪. ಉಟ್ಟದ್ದು ಖಾದಿಯ—

ಆರುವಾರದ—ಪಸರು ಅಂಚಿನ ಬಿಳಿಯ ಸೀರೆ. ಅದಕ್ಕೆ ತಕ್ಕಂತೆ ಎಲ್ಲ ಉಡುಪು. ಆಗಾಗ ತುಸು ದೂರದಿಂದ ನಿಂತು ನೋಡಿ ತಲೆ ತೂಗುವಳು. ಒಂದೆರಡು ನಿಮಿಷ ಗಳಲ್ಲಿ ಮುಗಿಸಿ ಕೈಗೆ ಕೈ ಜಾಡಿಸಿ ಉಲ್ಲಾಸದಿಂದ ವಾಡೊಂದನ್ನು ಗುಣಗುಣಿಸುತ್ತ ಗೋಡೆಗುಂಟ ಸುತ್ತಲೂ ಎಲ್ಲ ಭಾಂಡಗಳಲ್ಲಿಯ ಗಿಡಬಳ್ಳಿಗಳನ್ನು ಓರಣದಿಂದ ಇಡುವಂತೆ ಕೈ ಹಚ್ಚುತ್ತ ಸಾಗುವಳು. ತಟ್ಟನೆ ಗಡಿಯಾರವನ್ನು ನೋಡಿ, ಉಲ್ಲಾಸದ ಕಳೆಯನ್ನು ತೆಗೆದು ಅಧಿಕಾರದ ದರ್ಪವನ್ನು ಮುಖದಲ್ಲಿ ತಂದು— ]

**ಮಂದಾಕಿನಿ :—** ಚೆನ್ನಾ—ಏ ಚೆನ್ನಾ—(ಮುಂಬಾಗಿಲಿನ ಹರಗೆ ಬಂದು) ಏ ಚೆನ್ನಾ—

[ ಹೊರಗಿನಿಂದ 'ಬಂದ್ನ್ರಿ, ಅವ್ವಾವರ' ಎನ್ನುತ್ತ ಚೆನ್ನಪ್ಪನು ಬರುವನು. ತಲೆಗೆ ರುಮಾಲು ಸುತ್ತಿದ್ದಾನೆ. ಪೈರಣದ ತೋಳುಗಳನ್ನು ಮೊಳಕೈವರೆಗೆ ಏರಿಸಿದ್ದಾನೆ. ಉಟ್ಟದೋತರ ಮೊಳಕಾಲ್ಗಳ ಮೇಲೆ ಗಂಡಗಚ್ಚಿಯನ್ನೇರಿಸಿ ಕಟ್ಟಿದ್ದಾನೆ. ಅವನ ಎಲ್ಲ ಬಟ್ಟೆಗಳು ಹಸನಾಗಿವೆ. ಚೆನ್ನ ಮನೆಯ ಆಳು. ವಯಸ್ಸು ಅನಿಶ್ಚಿತ.]

**ಚೆನ್ನ :—** ( ಅಂಗೈಗಳನ್ನು ತಿಕ್ಕುತ್ತ ) ಬಂದ್ನ್ರಿ—ವಕೀಲ ಸುಬ್ಬಣ್ಣೋರ ಮನಸ್ಯಾ ಬಂದಿದ್ನರಿ—

**ಮಂದಾಕಿನಿ :—** (ಅಧಿಕಾರದ ದನಿಯಲ್ಲಿಯೇ) ಇರಲಿ .... ನಿನಗೇನು ಹೇಳಿದ್ದೆ ನಾನು ?

**ಚೆನ್ನ :—** ನೀವ್ಹೇಳಿದ್ರಿ. ಅಂತೇ ಹೇಳಾಕ ಹೊರಡಾಂವಿದ್ದೆನ್ರಿ ...ಅಟ್ರಾಗ ಸುಬ್ಬಣ್ಣೋರ ಮನಸ್ಯಾನೇ ಬಂದ್ನರಿ ...' ನಮ್ಮ ಮಂದಾಕಿನಿ ಅವ್ವಾ ಅವ್ರ ನಿಂ ವಕೀಲ್ರಿಗೆ ಬರ್ಲಾಕ ಹೇಳ್ಯಾರ' ಅಂತ ಹೇಳಿ—ಮತ್ತ ಗಟ್ಟಿಮುಟ್ಟ ಹೇಳೋ ಹಾಂಗ—

**ಮಂದಾಕಿನಿ :—** (ಬೇಜಾರದ ದನಿಯಲ್ಲಿ) ಅದಲ್ಲೋ ನಾನು ಕೇಳೋದು ? ಕರೆದ ಕೂಡಲೇ ಪ್ಯಾಗ ಬರ್ಬೇಕು ಅಂತ ಹೇಳಿದ್ದೆನೋ ಇಲ್ಲೋ ನಿನಗೆ ?

**ಚೆನ್ನ :—** ( ತನ್ನ ಮೈಕೈಕಾಲ್ಗಳನ್ನು ನೋಡುತ್ತ ) ಅದು– ಅದ್ – ಅದು ಖರೇತ್ರಿ, ಅವ್ವಾ.... ಹಾಂಗ ಕೇಳದ್ರ ಮರ್ತಿಲ್ಲಾ ಅಂದ್ರೂ ನಡೀತೈತಿ ...ದೊಡ್ಡ ಅಜ್ಜನೋರು ಕರ್ದಾಗ ದೋತರ ಕೆಳ್ತಕ ಉಟ್ಟು,

ಕೋಟು ಹಾಕಿ, ರುಮಾಲು ತೆಲೀಗಿಟ್ಟು ಬರ್ಬೇಕು ಅಂತ ನೀವ್ಹೇಳಿದ್ರಿ—

**ಮಂದಾಕಿನಿ :**— (ನಡುವೆಯೆ) ಇಷ್ಟು ಹೇಳಿದ್ರೂ ಮತ್ತೆ ಕೂಲಿ ಕೆಲಸ ಮಾಡೋ ಹುಂಬನ ಹಾಂಗೇ ಬಂದೆಯಲ್ಲ? ಧಡ್ಡನ್ನ ತಂದು!

**ಚೆನ್ನ :**— (ನೊಂದ ದನಿಯಲ್ಲಿ) ಧಡ್ಡನ ಅಲ್ಲ, ಹೇಳಿದ್ನೆಲ್ರಿ-ಅವ್ವಾ....ತುಸಾ ಶಾಣೇತನಾನೇ ಜಾಸ್ತಿ ಆಯ್ತನ್ರಿ....

**ಮಂದಾಕಿನಿ :**— (ನಗೆ ತಡೆಯದೆ) ಸಾಕ್ಹೋಗೋ! ಇನ್ನಿಷ್ಟು 'ಶಾಣೇತನ ಜಾಸ್ತಿ' ಆಗಿ ತಲೆಯೊಳಗ ಹಿಡಿಸಲಿಲ್ಲಾಂತ ರುಮಾಲಾನೂ ತೆಗೆದಿಟ್ಟು ಬಂದೀಯ!

**ಚೆನ್ನ:**— (ಹೊರಗೆ ಹೊರಡುತ್ತ) 'ದೊಡ್ಡ ಅಜ್ಜನೋರು, ದೊಡ್ಡ ಅಜ್ಜನೋರು ಕರ್ದ್ಯಾಗ' ಅಂತ ಧ್ಯಾಸದಾಗಿಟ್ಟುಕೊಂಡು ಈಗ ದೊಡ್ಡ ಅಜ್ಜನೋರು ಕರೆದಿಲ್ಲಾಂತ—

**ಮಂದಾಕಿನಿ :**— (ನಡುವೆಯ) ಚೆನ್ನಾ— (ತಡೆದು ನಿಲ್ಲಲು) —ಮಧ್ಯಾಹ್ನದೊಳಗ ಈ ಬಾಗಿಲಿಗೆ ಏನ್ಮಾಡ್ಬೇಕಂತ ಹೇಳಿದ್ದೆನೊ?

**ಚೆನ್ನ :**— (ತಿಳಿಯದೆ) ಈ ಬಾಗಿಲ್‌ಲ್‌ಗೆ – (ತಟ್ಟನೆ ಹೊಳದು) ಥೂ! ಇಪರ! ಒತ್ತಟೆ ಶಾಣೇತನ ಜಾಸ್ತಿಆಗೋದ್ರಾಗ ಒತ್ತಟ ಬುದ್ಧೀನೇ ಮರವಾಗ್ತೈತ್ಯೊ ಏನೋ! (ಎನ್ನುತ್ತ ಬಾಗಿಲಿನ ಒಳಬದಿಗೆ ಮೇಲ್ತುದಿಗೆ ಸುರುಳಿಯಾಗಿ ಸುತ್ತಿ ಕಟ್ಟಿದ ಚಾಪೆಯನ್ನು ಇಳಿಬಿಡುವನು) ಗಡಾನೆ ಕೋಟು ಹಾಕ್ಕೊಂಡು ಬರ್ತೀನ್ರಿ, ದೊಡ್ಡ ಅಜ್ಜನೋರು ಕೆಳಗ ಬರೋದ್ರಾಗ....(ಮಂದಾಕಿನಿಯ ಲಕ್ಷ್ಯ ಮತ್ತೆಲ್ಲೊ ಸುಳಿದದ್ದನ್ನು ಕಂಡು ಮುಂಬಾಗಿಲಿನಿಂದ ಹೊರಗೆ ಹೋಗುವನು)

[ ಮಂದಾಕಿನಿಯು ಒಂದೆರಡು ನಿಮಿಷ ಏನನ್ನೊ ವಿಚಾರಿಸಿದಂತೆ ಮಾಡಿ ಉಸುರ್ಗರೆದು ಮೆಲ್ಲನೆ ನಡೆಯುತ್ತ ಮೇಲಟ್ಟದ ಪಾವಟಿಗೆಗಳ ಕಡೆಗೆ ಸಾಗುವಳು. ಮೊದಲಿನ ಪಾವಟಿಗೆಯ ಮೇಲೆ ಹೆಜ್ಜೆಯನ್ನಿಟ್ಟು ತಡೆಯುವಳು. ಕೊನೆಗೆ ಮತ್ತೆ ತಿರುಗಿ ಬಂದು ಬಲಬದಿಯ ಬಾಗಿಲಿಗೆ ನಿಂದು—]

**ಮಂದಾಕಿನಿ :**— ಅನಂತಾ—

[ ' ಬಂದೆ, ತಾಯಿ, ' ಎನ್ನುತ್ತ ಒಳಗಿನಿಂದ ಅನಂತನು ಬರುವನು. ಇವನು ಮನೆಯ ಅಡುಗೆಯವ. ಶುಭ್ರವಾದ ಶರ್ಟನ್ನು ತೊಟ್ಟಿದ್ದಾನೆ. ಮೊಳಕಾಲ್ಗಳ ಮೇಲೆ ಪಂಚೆಯನ್ನು ಉಟ್ಟಿದ್ದಾನೆ. ತಲೆಯ ಕ್ರಾಪನ್ನು ಅತ್ಯಂತ ಓರಣವಾಗಿ ಬಾಚಿಕೊಂಡಿದ್ದಾನೆ. ಕೂದಲಿಗೆ ಹಚ್ಚಿದ ಎಣ್ಣೆಯ ತೆರೆಗಳು ಹಣೆಯಂಚಿಗೆ ಅಪ್ಪಳಿಸಿದ ಗುರುತುಗಳು ಸ್ಪಷ್ಟವಾಗಿ ಕಾಣುವುವು. ಆದರೆ ಅನಂತನನ್ನು ನೋಡಿದಾಕ್ಷಣ ಮಂದಾಕಿನಿಯು ಒಮ್ಮೆಲೆ ನಿರಾಶೆಯ ಕಳೆಯನ್ನುತಾಳಿ ' ಅಯ್ಯ ' ಎಂದು ದಣಿದವಳಂತೆ ಕಾಲ್ಗಳನ್ನು ಎಳೆಯುತ್ತ ನಡೆದು ಮೇಜಿನ (ಪ್ರೇಕ್ಷಕರ ಎಡ) ಬದಿಯ ಕುರ್ಚಿಯಲ್ಲಿ ಬಿದ್ದುಕೊಂಡು—]

**ಮಂದಾಕಿನಿ :—** ( ಅನಂತನನ್ನು ನೋಡಿಯೂ ನೋಡದಂತೆ ) ಸಾಕಾಗಿ ಹೋಯ್ತು ನನಗ (ಎಂದು ಕುರ್ಚಿಯ ಕೈಮೇಲೆ ಬಲ ಮೊಳಕೈಯನ್ನೂರಿ ಅಂಗೈ ಹಿಂಬದಿಯಲ್ಲಿ ಕೆನ್ನೆಯನ್ನಿಟ್ಟು ಅತ್ಯಂತ ಉದ್ವಿಗ್ನದೃಷ್ಟಿಯಿಂದ ಕೂಡುವಳು).

**ಅನಂತ :—** (ಏನೂ ತಿಳಿಯದೆ, ಗಾಬರಿಯ ಕಳೆಯಿಂದ) ಇಲ್ಲ—ತಾಯೀ— ಎಲ್ಲಾ ತಯಾರಿ ಮಾಡಿಟ್ಟೀನಿ.... ಅಜ್ಜ ಸಾಹೇಬರು ಕೆಳಗ ಬರೋ ಹಾದೀನೇ ನೋಡ್ತಾ ಇದ್ದೀನಿ—

**ಮಂದಾಕಿನಿ :—** (ಸಿಡುಕಿನ ದನಿಯಲ್ಲಿ) ಹಾಗೇ ಒಂದಿಷ್ಟು ಕೆಳಗೂ ನೋಡಿಕೋಬೇಕಿತ್ತು ! ( ಅನಂತನು ಬೆದರಿದ ಮುಖದಿಂದ ತನ್ನ ಕಾಲ್ಗಳನ್ನು ನೋಡಲು) ಇದೇ—ನಾನೂ ಹೇಳಿದ್ದು ! ನಿನ್ನ ಕಾಲು ನೋಡುವಂಥಾವ್ರ ಅಂತ ನಿನಗನಿಸಿದ್ರೂ ಮಂದೀಗೆ ತೋರಿಸೋ ಹಟಾ ಬ್ಯಾಡ ಅಂತ ಹೇಳಿದ್ದಿಲ್ಲ ? ಧೋತರಾ ಉಟ್ಕೊ—

**ಅನಂತ :—** (ತಿಳಿದು, ಹುಚ್ಚು ನಗೆಯಿಂದ) ಇಲ್ಲ—ತಾಯೀ— ತಪ್ಪು ಆಯ್ತು— ಆದರೂ—ಆದರೂ (ನಾಚಿಕೆಯಿಂದ ತಡೆಯಲು)

**ಮಂದಾಕಿನಿ :—** (ರೇಗಿ) ಆದರೂ—ಏನು ? ಇಲ್ಲ ಅನ್ನೋದಕ ನಾಚಿಕೆ ಯಾಕೆ ? ಈಗ ಚೆನ್ನನ್ನ ಕಳುಹಿಸಿ ಕೊಡ್ತೀನಿ ಅಂಗ್ಡೀಗೆ....

**ಅನಂತ :—** (ಒಮ್ಮೆಲೆ) ಅಲ್ಲಲ್—ಅದಲ್ಲ—ಅಂದ್ರೆ (ಮಂದಾಕಿನಿ ಸಿಟ್ಟಿನಿಂದ ನೋಡಲು) ದೊಡ್ಡ ದೋತರಾ ಉಟ್ಟು ಅಡಿಗೆ—ಬಡಿಸೋ ಕೆಲ್ಸದ ರೂಢಿ ಇಲ್ಲ—ಕಾಲೊಳಗ ಸಿಕ್ಕಿ— ಅಂದ್ರ ಅಸಹ್ಯ ಆದೀತೂಂತ ಉಟ್ಟಿದ್ದು ಬಿಟ್ಟು ಮತ್ತೆ ಪಂಚೆ ಉಟ್ಕೊಂಡೆ—

ಮಂದಾಕಿನಿ :— (ಪೇಜಾರದ ದನಿಯಲ್ಲಿ) ಏನೋ—ಏನೋ! (ಅರ್ಧ ತನ್ನಷ್ಟಕ್ಕೆ) ಇಡಿಯ ವರ್ಷ ದೇಶಸಂಚಾರಕ್ಕ ಹೋಗಿದ್ದ ಅಜ್ಜ. ಅವನು ಬರೋದ್ರೊಳಗ ಅವನಿಗಾಗಿ ಹೊಸ ಮನೆ ಕಟ್ಟಿಸಿ, ಬಂದ ದಿವಸಾದ್ರೂ ಮನೆಗೆ ತಕ್ಕ ಶಿಸ್ತು ಇಡ್ಬೇಕೊಂದ್ರೆ—(ಒಮ್ಮೆಲೆ ಸಿಕ್ಕ—ಅನಂತನಿಗೆ) ಹುಂ—ಹೋಗು ನೀನು (ಅವನು ಗಾಬರಿಯ ಕಳೆಯಿಂದಲೇ ಹೋಗುವನು) ಕೋಟು ಹಾಕಿ ಒಬ್ಬನಿಗೆ ರೂಢಿ ಇಲ್ಲ, ಮೈತುಂಬ ಧೋತರ ಉಟ್ಟು ಇನ್ನೊಬ್ಬನಿಗೆ ರೂಢಿ ಇಲ್ಲ! ಇಂಥಾ ದೇಶದಾಗ ನಾನೇ ಒಂದು ಹುಚ್ಚಿ (ಎನ್ನುತ್ತ ಬಗುಬಗೆಯಿಂದ ಎದ್ದು) ನಾನೇ ಹೋಗಿ ನೋಡಿ, ಮಾಡಿ ಇಟ್ಟು ಬರೋದೇ ನೆಟ್ಟಗ ಕಾಣಿಸ್ತದ (ಎನ್ನುತ್ತ ಒಳಬದಿಯ ಬಾಗಿಲಿನಿಂದ ಮನೆಯೊಳಗೆ ಹೋಗುವಳು)

[ ಒಂದೆರಡು ನಿಮಿಷ ನಿಸ್ತಬ್ಧತೆ ]

[ಕೂಡಲೇ ಮೇಲಿನಿಂದ ಅವಸರವಸರವಾಗಿ ಇಳಿದು ಬರುವ ಕಾಲುಸಪ್ಪು. ಅಷ್ಟರಲ್ಲಿ ಅವನ ಕೈಯಲ್ಲಿ ಕನ್ನಡ ವೃತ್ತಪತ್ರ, ಹಣೆಗೆ ಏರಿಸಿದ ಕನ್ನಡಕ, ಮೇಲಿನ ಗುಂಡಿಯನ್ನು ಹಾಕದೆ ತೊಟ್ಟ ಶರ್ಟ, ಬರಿ ತಲೆ, ಕುಳ್ಳದೇಹ, ತೆಳ್ಳನ್ನ ಮೈಕಟ್ಟು ತುಸು ಬಾಗಿದ ಬೆನ್ನು—ಈ ರೀತಿಯ ವ್ಯಕ್ತಿಯೊಂದು ನಡೆದು ಬರುವದು. ಇಡಿಯ ಜಗತ್ತನ್ನು ಯಾವಾಗಲೂ ಅಲಕ್ಷಿಸುವಂತಹ ಕಳೆ. ಒಂದು ಕಡೆ ಒಂದು ಹೆಜ್ಜೆಯನ್ನು ಒಂದು ನಿಮಿಷ ಸ್ಥಿರವಾಗಿ ಊರದಂತಹ ಚಂಚಲ ಮನೋವೃತ್ತಿ. ಕೆಳಗೆ ನಡೆದು ಬರುವಾಗ ಪತ್ರಿಕೆಯನ್ನು ಎಡಗೈಯಲ್ಲಿ ಹಿಡಿದು ಬಲಗೈ ಬೆರಳುಗಳ ಹಿಂಬದಿಯಿಂದ ಅದನ್ನು ಬಡಿಯುತ್ತ 'ನೋಡಿಲ್ಲ—ನೋಡಿಲ್ಲಿ' ಎನ್ನುತ್ತ ಕೊನೆಯ ಪಾವಟಿಗೆಗೆ ಹೆಜ್ಜೆ ತಪ್ಪಿ ಟಣ್ಣನೆ ಜಿಗಿದು 'ಮಂದಾ—ಮಂದಾಕಿನೀ— ನಾ ಏನ್ಹೇಳ್ತಿದ್ದೆ ನಿನಗೆ?' ಎನ್ನುತ್ತ ಬಂದು ಕುರ್ಚಿಯಮೇಲೆ ಕುಳಿತು ]

ವ್ಯಕ್ತಿ :— (ಯಾರೂ ಇಲ್ಲೆಂಬುದು ಲಕ್ಷ್ಯಕ್ಕೆಯೆ ಬಾರದೆ, ಕಾಲಮೇಲೆ ಕಾಲನ್ನಿಟ್ಟು ಕನ್ನಡಕವನ್ನು ಕಣ್ಣಿಗಿರಿಸಿ) ನೋಡಿಲ್ಲಿ— See here ಮಂದಾ! ನಾ ಹೇಳಿದ್ದೆನೋ ಇಲ್ಲೋ?— ಆಂ? I did tell you— ಆಂ—ಕೇಳಿಲ್ಲಿ (ಓದುವನು) 'ಬಿಂದೂರಾಯರ ಹೊಸ ಕಾದಂಬರಿ ಎಂದರೆ ಅವರ ಎಲ್ಲ ಗ್ರಂಥಗಳಂತೆ ಕ್ರಾಂತಿಕಾರಕವಾಗಿದೆ, ಆದರೂ ಸಮಾಜಕ್ಕೆ ಮಾರ್ಗದರ್ಶಕವಾಗಿದೆ, ವಿಶೇಷವಾಗಿ Socialismದ ಆಧಾರ ಗ್ರಂಥವಾಗಿದೆ!.... (ತಡೆದು) Nonsense! ಹುಚ್ಚರು!

(ಎಂದು ಕೈಚಾಚಿ ಮೇಜಿನ ಮೇಲಿನಿಂದ ಲಕ್ಷ್ಯವಿಲ್ಲದೆಯೆ ಒಂದು ತಿನಿಸನ್ನು ತೆಗೆದುಕೊಂಡು ತಿನ್ನುತ್ತ) ನನ್ನಂಥವ್ರು ಪುಸ್ತಕ ಬರೆಯೋವರೊಳಗ ಅರ್ಥವೆ ಇಲ್ಲ—no use at all .... ಆಂ ....? (ಒಮ್ಮೆಗೆ ಯಾರೂ ಇಲ್ಲದ್ದು ಲಕ್ಷ್ಯಕ್ಕೆ ಬಂದು) ಯಾವಾಗ ಹೋದಳು ಮಂದಾಕಿನಿ? (ಅತ್ತಿತ್ತ ನೋಡುತ್ತ) ಏನು ಯಾರೂ ಇಲ್ಲವೇ ಇಲ್ಲೊ ಇಲ್ಲಿ ?

[ ಹೊರಗಿನಿಂದ ಒಮ್ಮೆಲೆ ಚೆನ್ನನು ಬರುವನು. ಕೈಯಲ್ಲಿದ್ದ ಕೋಟನ್ನು ಅವಸರವಸರವಾಗಿ ಮೈಗೆ ಸಿಕ್ಕಿಸಿಕೊಳ್ಳುತ್ತ— ]

**ಚೆನ್ನ** :— ಬಂದ್ನಿರಿ— ಇಲ್ಲೇ ಇದ್ನಿರಿ (ಎನ್ನುವಾಗ ಈ ವ್ಯಕ್ತಿಯನ್ನು ನೋಡಿ ಕೋಟನ್ನು ತೆಗೆಯುತ್ತ, ತೆಗೆದು ಕಂಕುಳದಲ್ಲಿರಿಸುತ್ತ) ದೊಡ್ಡ ಅಜ್ಜನೋರು ಕರೆದ್ರೂಂತ ಮಾಡಿದ್ನಿರಿ (ವ್ಯಕ್ತಿಯು ಚಕಿತ ದೃಷ್ಟಿಯಿಂದ ತನ್ನನ್ನು ನೋಡಲು ಹೇಳುವನು.)

**ವ್ಯಕ್ತಿ** :— ಯಾವ ಅಜ್ಜನೋರು ಅಂದಿ ?

**ಚೆನ್ನ** :— ದೊಡ್ಡ ಅಜ್ಜನೋರ್ರಿ....

**ವ್ಯಕ್ತಿ** :— ದೊಡ್ಡ ! ಅಂದ್ರೆ ನನ್ನೇನು ಸಣ್ಣ ಅಜ್ಜ ಮಾಡಿಬಿಟ್ಟೋನು ಮನೆಯೊಳಗೆ! ಆಂ—? What do they take me for. ಆಂ? .. ನಾ ಬರೆದ ಪುಸ್ತಕಾನೂ ತಿಳಿಯೋದಿಲ್ಲ—ನಾನೂ ತಿಳಿದಿಲ್ಲ. ಆಂ—? Nobody understands me— ಮಂದಾಕಿನಿ ಎಲ್ಲಿ ಇದ್ದಾಳೆ ? .. waste of time ನನ್ನಂಥವ್ರದು—

**ಚೆನ್ನ** :— ಒಳಗ ಇದ್ದಿರಬೇಕ್ರಿ ಅವ್ವಾ ಅವ್ರು—

**ವ್ಯಕ್ತಿ** :— ಆಂ— ? Socialismದ ಆಧಾರ ಗ್ರಂಥ ... ಹಹ ! ... ಮಂದಾಕಿನೀ, I say Mandoo—(ಎನ್ನುತ್ತ ಬಲಬದಿಯ ಬಾಗಿಲಿನಿಂದ ಒಳಗೆ ಹೋಗುವನು).

**ಚೆನ್ನ** :— (ಅವನು ಹೋದತ್ತ ನೋಡುತ್ತ) ಮಾತಾಡಿಧಾಂಗೇ ನಮ್ಮ ಬಿಂದೂರಾಯ ಪುಸ್ತಕಾ ಬರೀತಿದ್ದರ ಓದಾವ್ರ ನಶೀಬ—(ಎನ್ನುತ್ತ ಮತ್ತೆ ಮುಂಬಾಗಿಲಿನಿಂದ ಹೊರಗೆ ಹೋಗುವನು)

[ ತುಸು ಹೊತ್ತಿನಲ್ಲಿ ಚೆನ್ನನು ಅವಸರವಸರವಾಗಿ ಒಳಗೆ ಬರುವನು. ಅದೇ ಅವಸರದಲ್ಲಿ ಕೋಟನ್ನು ಹಾಕಿಕೊಳ್ಳುವನು. ಕೋಟಿನಗುಂಡಿಗಳನ್ನೂ ಹಾಕಿ ಅದನ್ನು ಸರಿಪಡಿಸಿಕೊಂಡು ದೃಷ್ಟಿಯನ್ನೆಲ್ಲ ಮುಂಬಾಗಿಲಿನಿಂದ ಹೊರಗೆಯೆ ಇಟ್ಟು

ಕೆಳಗೆ ನೋಡಲಾರದವನಂತೆ ಕುರ್ಚಿಗಳನ್ನು ಶಿಸ್ತಿನಿಂದ ಇಡುವವನಂತೆ ನಟಿಸುತ್ತಿರುವನು. ಇಷ್ಟರಲ್ಲಿ ಮುಂಬಾಗಿಲಿನ ಚಾಪೆಯನ್ನು ತುಸು ಬದಿಗೆ ಸರಿಸಿ ಒಂದು ಮುಖವು ಒಳಗೆ ಹಣಿಕಿಕ್ಕುವುದು. ಅದನ್ನು ನೋಡದವನಂತೆ ಚೆನ್ನನು ಕೆಳಗೆ ಮುಖ ಮಾಡಿ ಕೆಲಸದಲ್ಲಿ ಮಗ್ನನಾದವನಂತೆ ನಟಿಸುವನು. ಹಣಿಕಿಕ್ಕಿದ ಮುಖವು ಮೆಲ್ಲಗೆ ಒಳಗೆ ಬರುವದು—ಮುಗುಳ್ನಗೆಯಿಂದ—ದೇಹ ಸಹಿತವಾಗಿ—ತಲೆಗೆ ಶುಭ್ರವಾದ ಗಾಂಧಿಟೊಪ್ಪಿಗೆ—ಮೈಯಲ್ಲಿ ನೆಹರು ಶರ್ಟು, ನೆಹರೂ ಜಾಕೀಟ್. ಉಟ್ಟಿದ್ದು ಶುಭ್ರವಾದೀ ಧೋತರ. ಸುಮಾರು ೪೫ ವಯಸ್ಸಿನ ವ್ಯಕ್ತಿ. ಒಂದೆರಡು ಹೆಜ್ಜೆ ಮೆಲ್ಲಗೆ ಒಳಗೆ ನಡೆದು ಬಂದು—]

**ವ್ಯಕ್ತಿ** :— (ಮುಗುಳ್ನಗೆಯಿಂದಲೆ) ನಮ್ಮಂಥವರು ಒಳಗೆ ಬರಬಹುದೇನು ಚೆನ್ನ ?

**ಚೆನ್ನ** — (ಈಗ ನೋಡಿದವನಂತೆ) ಆಂ—ಬರ್ರಿ—(ವಿನಯದಿಂದ) ಬರ್ರಿ ಸುಬ್ಬಣ್ಣ ಸಾವಕಾರ್ ರ್—ವ—ವಕೀಲ್ರಿ—

**ಸುಬ್ಬಣ್ಣ** :— (ಚಕಿತನಾಗಿ) ಏನಂದಿ, ಚೆನ್ನ ? 'ಸುಬ್ಬಣ್ಣ ಸಾವ್ಕಾರ'—?

**ಚೆನ್ನ** — ತಪ್ಪಿ ಬಾಯೀಗ ಬಂತರಿ—

**ಸುಬ್ಬಣ್ಣ** :— (ತುಸು ಮುಂದೆ ನಡೆದು ಬಂದು) ಬಾಯಿಯಿಂದ ತಪ್ಪಿ ಒಂದರೂ ನಿನಗ ಆ ಹೆಸರು ಹ್ಯಾಂಗ ಗೊತ್ತಾಯ್ತು—?

**ಚೆನ್ನ** :— (ನಡುವೆಯೆ) ಗೊತ್ತೈತ್ರಿ ನನ್ಗ ...ಆ ಯಾಳೇದಾಗ ನಾನು ಅಲ್ಲೇ ಇದ್ದಿನ್ರಿ—

**ಸುಬ್ಬಣ್ಣ** :— (ಆಶ್ಚರ್ಯದಿಂದ) ನೀನೂ ಅಲ್ಲಿ ಇದ್ದಿಯಾ ? ಯಾಕೆ ? ಏನ್ಮಾಡಿ—

**ಚೆನ್ನ** :— (ವಿನಯ) ಮಾಡಾಕ ಯಾಳೇನೇ ಕೊಡಲಿಲ್ರಿ.... ಎಲ್ಲಾರ ಜೋಡಿ ನನ್ನೂ ಒಯ್ದರ್ರಿ—

**ಸುಬ್ಬಣ್ಣ** :— (ಅತ್ಯಂತ ಆಶ್ಚರ್ಯದಿಂದ ಚೆನ್ನನನ್ನು ದಿಟ್ಟಿಸುತ್ತ) ಅಂದರೆ—ಅಂದರೆ—ಚೆನ್ನಾ—ನೀನೂ ನಮ್ಮ ಹಾಂಗೇ ದೇಶಕ್ಕಾಗಿ ಜೇಲು ಕಂಡು ಬಂದವ....

**ಚೆನ್ನ** :— ನಿಮ್ಹಾಂಗ ಹ್ಯಾಂಗಾದೀತ್ರಿ, ಸುಬ್ಬಣ್ಣೋರ? ಅದೇ ಜೇಲ್‌ದಾಗ ನೋಡಿದಿನ್ರಿ ನಾ.... ಜೇಲರ ಸಾಬನ ಫಜೀತಿ ಮಾಡಿ ನೀವು

ಬೇಕ್ಬೇಕಾದ್ದು ತರಿಸಿಕೊಂತಿದ್ರಿ, ನಿಮ್ಮ ಜನಾ ಎಲ್ಲಾ ನಿಮ್ಗ ಸಾವ್ಕಾರ ಸುಬ್ಬಣ್ಣೋರು ಅಂತಿದ್ರು—

**ಸುಬ್ಬಣ್ಣ** :— (ಒಮ್ಮೆಲೆ ಚೆನ್ನನ ಬೆನ್ನು ತಟ್ಟಿ) ಏನು ಅಡ್ಡಿ ಇಲ್ಲ, ಚೆನ್ನ... ನನಗೊತ್ತಿರಲಿಲ್ಲ. ನೀನೂ ದೇಶದ ಸ್ವಾತಂತ್ರ್ಯಯುದ್ಧದ ವೀರ ಅಂತ.... (ಅತ್ತಿತ್ತ ಸುತ್ತಲೂ ನೋಡುತ್ತ) ಏನೂ ಅಡ್ಡಿ ಇಲ್ಲ.. (ಒಮ್ಮೆಲೆ ವಿಷಯಾಂತರಿಸಿ) ಈ ಹೊತ್ತಿನ ಮನೆಯ ಶಿಸ್ತು ನೋಡಿದ್ರ ಪಾಂಡಪ್ಪನವರು ಮುಂಜಾನೆ ಗಾಡಿಗೆ ಬಂದರು ಅಂತ ಕಾಣಿಸ್ತದೆ—

**ಚೆನ್ನ** :— ಬಂದರ್ರಿ, ದೊಡ್ಡ ಅಜ್ಜನೋರು. ರಾತ್ರಿ ನಸಕಿನ ಗಾಡಿಗೇ ಬಂದರ್ರಿ....ಅಜ್ಜನ್ನ ನೋಡ್ಬೇಕು ಅಂತ ಅವ್ವಾ ಅವ್ರಿಗೆ ಅಟೊಂದು ಹಂಬಲ— ರಾತ್ರೀನೇ ಹೋಗಿ ಕುಂತರು ನೇಸನ್ನಾಗ... ನನಗ ಹೇಳಿದ್ರು 'ಚೆನ್ನ, ಮನೀ ಶಿಸ್ತು ಮಾಡೋದು ನಿನ್ನ ಕೆಲಸ ನೋಡು' ಅಂತ—

**ಸುಬ್ಬಣ್ಣ** :— (ಒಂದು ಕುರ್ಚಿಯಲ್ಲಿ ಕುಳಿತಕೊಳ್ಳುತ್ತ) ಅಂದರೆ—ಇದೆಲ್ಲಾ ನಿನ್ನ ಕೆಲಸ ಅನ್ನು (ಸುತ್ತಲೂ ತಲೆದೂಗುತ್ತ ನೋಡುವನು)

**ಚೆನ್ನ** :— ನನ್ದು ಹ್ಯಾಂಗ ಆದೀತ್ರಿ ? ಶಿಸ್ತು ಮಾಡಾಕ ಬೇಕು ಅಂತ ಮೊದ್ಲ ಯಿಚಾರ ಹಾಕಿದವ್ರು ಅವ್ವಾಅವ್ರು—

**ಸುಬ್ಬಣ್ಣ** :— ಆಯ್ತು— ನಾನು ಬಂದಿದ್ದೆ ಅಂತ ಹೇಳು— (ಏಳಲುದ್ಯುಕ್ತನಾಗುವನು)

**ಚೆನ್ನ** :— (ಅವಸರದಿಂದ) ಇಲ್ಲ—ಕುಂತಗೋರಿ. ಸುಬ್ಬಣ್ಣೋರ. ಹೇಳ್ತೇನಿ ಅವ್ವಾ ಅವ್ರಿಗೆ, ಯಾವಾಗಿನಿಂದ ನಿಮ್ಮ ಹಾದೀ ಕಾಯ್ತಾರ (ಬಲಬಾಗಿಲಿನಿಂದ ಒಳಕ್ಕೆ ಹೋಗುವನು)

**ಸುಬ್ಬಣ್ಣ** :— (ಎದ್ದು ಬೆನ್ನಿಗೆ ಕೈಕಟ್ಟಿಕೊಂಡು ಅತ್ತಿತ್ತ ಪಾತ್ರೆಯೊಳಗಿನ ಗಿಡಬಳ್ಳಿಗಳನ್ನು ಕೈಯಿಂದ ಮುಟ್ಟಿ ನೋಡುತ್ತ ತಿರುಗುತ್ತಿರುವನು. ಇವನು ಎಡಬದಿಯ ಗೋಡೆಗೆ ನಿಂತಾಗ ಹಿಂದಿನ ಬಲಬಾಗಿಲಿನಿಂದ ಮಂದಾಕಿನಿಯು ಬರುವಳು)

**ಮಂದಾಕಿನಿ** :— (ಅವನನ್ನು ಒಂದು ನಿಮಿಷ ಮೌನದಿಂದ ನೋಡಿ, ಮುಗುಳ್ನಗೆಯಿಂದ) ವಕೀಲರಿಗೆ ಹೋಗೋ ಅವಸರ ಇದೆ ಅಂತ ಹೇಳಿದೆನಲ್ಲ, ಚೆನ್ನ !

**ಸುಬ್ಬಣ್ಣ** :— ( ದನಿ ಕೇಳಿದೊಡನೆ ತಿರುಗಿ ನಿಂತು ) ಪಕ್ಷಗಾರರ ಮೇಲೆ 'ಛಾಪ' ಹಾಕೋದರ ಪೂರ್ತಿ ವಕೀಲರ ಅವಸರ. ( ನಗೆಯಿಂದ ಮುಂದೆ ಬಂದು ) ಇಲ್ಲ. ನನಗೆ ನಿಜವಾಗಿಯೆ ಹೋಗೋದಿದೆ, ಮಿಸ್ ಮಂದಾಕಿನೀ. ( ಕೈಗಡಿಯಾರವನ್ನು ನೋಡಿಕೊಂಡು ) ಆರೂವರೆ ಗಂಟೆಗೆ ಸಭಾ ಇದೆ.

**ಮಂದಾಕಿನಿ** :— ನೀವು ಅಲ್ಲಿಯವರೆಗೆ ಕೂತುಕೊಂಡರೆ ನಾನೂ ಬರ್ತೀನಿ ಏನು ನಾನು ಬರಬಾರದು ಅಂತ ನಿಮ್ಮ ಇಚ್ಛ್ಯಾನೊ!

**ಸುಬ್ಬಣ್ಣ** :— ( ಕುರ್ಚಿಯನ್ನೆಳೆದು ಕುಳಿತುಕೊಳ್ಳುವನು )

**ಮಂದಾಕಿನಿ** .— ( ಅವನನ್ನು ಅನುಕರಿಸುತ್ತ ತಾನೂ ಒಂದು ಕುರ್ಚಿಯನ್ನು ಎಳೆದು ಕುಳಿತುಕೊಳ್ಳುವಳು )

[ ಇಬ್ಬರೂ ನಗುವರು ]

**ಸುಬ್ಬಣ್ಣ** :— ನಾನು ಇಲ್ಲಿ ಬಂದೆ ಅಂತ ನೀನು ಸಭಾಕ್ಕೆ ಬರ್ಬೇಕಾಗಿಲ್ಲ. ಹಾಗೆ ಕೇಳಿದರೆ ನಿಮ್ಮ ಪ್ರೀತಿಯ ಅಜ್ಜ ಒಂದು ವರ್ಷದ ದೇಶ ಸಂಚಾರ ಮಾಡಿ ಈಹೊತ್ತು ಬಂದರು—ಅದಕ್ಕ ನೀನು ಬರಲಿಕ್ಕಿಲ್ಲ ಅಂತ ಅನಿಸಿ ಹಾಗೆ ಹೇಳಿದೆ.

**ಮಂದಾಕಿನಿ** :— ( ಕೆಣಕುವ ದನಿಯಲ್ಲಿ ) ಅಜ್ಜನ ಮೇಲೆ ಎಷ್ಟು ಪ್ರೀತಿ ಅಂತ ನಿಮಗ್ಯಾರು—

**ಸುಬ್ಬಣ್ಣ** .— ( ನಡುವೆಯೆ ಕೈಮಾಡಿ ಸುತ್ತುಮುತ್ತಲನ್ನು ತೋರಿಸುತ್ತ ) ಎಂದೂ ಇಲ್ಲದ ಇಂದಿನ ಈ ಶಿಸ್ತು, ಈ ಓರಣ—ಇದು ಹೇಳತಾ ಇದೆ. ನೀನು ಬರುವಾಗ ಅದನ್ನೇ ನೋಡಿ ಮೈಮರೆತು ನಿಂತಿದ್ದೆ .. ಹಂ....ಮರೆತೆ....ನಿಮ್ಮ ತಂದೆಯವರು ಎಲ್ಲಿದ್ದಾರೆ? ಅವರ ಹೊಸ ಕಾದಂಬರಿಯ ವಿಮರ್ಶಾ ಬಂದಿದೆ, ನೋಡ್ಯಾರೋ ಇಲ್ಲೊ, ಅವರಿಗೂ ಹೇಳೋಣ ಅಂತ—

**ಮಂದಾಕಿನಿ** :— ( ನಕ್ಕು ) 'ನೋಡಿಯಾರೋ ಇಲ್ಲೊ' ಅಂತ! ಈಹೊತ್ತು ಮುಂಜಾವಿನಿಂದ ಅದನ್ನೇ ಓದತಾ ಇದ್ದಾರೆ. ಈಗ ಅಲ್ಲಿ ಒಳಗ ಅನಂತಗ ಓದಿ ತೋರಿಸ್ತಾ ಇದ್ದಾರೆ—

**ಸುಬ್ಬಣ್ಣ** :— ( ಆಶ್ಚರ್ಯದಿಂದ ) ಅನಂತಗ! ಅಂದ್ರೆ ಅಡಿಗೆಯವನಿಗೆ—?

**ಮಂದಾಕಿನಿ :—** ( ತಲೆ ತೂಗುತ್ತ ) ತಮ್ಮ ಕಾದಂಬರಿ Socialismದ ಆಧಾರ ಗ್ರಂಥ ಅಂತ ಹೇಳಿಲ್ಲ ಆ ವಿಮರ್ಶೆಯೊಳಗ ? ಅದಕ್ಕ Socialist ಆಗಿ ಅಡುಗೆಯವನ ಜೋಡಿ ಚರ್ಚಾ ನಡಿಸ್ಯಾರ !

**ಸುಬ್ಬಣ್ಣ :—** ಒಂದು ವೇಳೆ ಬಿಂದೂರಾಯರು ನಿಜವಾಗಿಯೇ Socialist ಇದ್ದರೆ ಅವರಿಗೆ ಇದೆಲ್ಲಾ ( ಮನೆಯನ್ನು ತೋರಿಸುತ್ತ ) ನೋಡಿ ಏನು ಅನ್ನಿಸಬಹುದು ಅಂತೀನಿ !

**ಮಂದಾಕಿನಿ :—** ಅನ್ನಿಸೋದೇನು ? ತಮ್ಮ ಮಗಳು Bolshevist ಇದ್ದದ್ದೇ ನಿಜ ಅನ್ನಿಸೋದು.

**ಸುಬ್ಬಣ್ಣ :—** Bolshevist ! ಹಹ ! ಮಿಸ್ ಮಂದಾಕಿನೀ, ನೀನು Bolshevist ಹಹಹ !

**ಮಂದಾಕಿನಿ :—** ( ಸೋಗಿನ ಸಿಟ್ಟಿನಿಂದ ) ಯಾಕ ? ನಗ್ತೀರಿ ಯಾಕ ಅದಕ್ಕ ? ಸುಳ್ಳೇನು ? ಪ್ರಹ್ಲಾದ Bolshevist ಮಾಡ್ಯಾನ ಹೆಂಗಸಿನ್ನ....

**ಸುಬ್ಬಣ್ಣ :—** ಹಹಹಹ !

**ಮಂದಾಕಿನಿ :—** ( ತುಸು ನಿಜವಾದ ಸಿಟ್ಟಿನಿಂದಲೆ ) ಅಯ್ಯ ! ಸುಳ್ಳುಳ್ಳೇ ಯಾಕೆ ನಗ್ತೀರಿ ಅಂತೀನಿ ? ತನ್ನವನ್ನೋ ಆಸ್ತಿ ಇಲ್ಲದೆ ಇನ್ನೊಬ್ಬರ ಆಸ್ತಿಯೊಳಗೆ ಪಾಲು, ಅಧಿಕಾರ ಇರೋದಿಲ್ಲ ಹೆಂಗಸಿಗೆ ? ಇದಕಿಂತ ಹೆಚ್ಚಿಗೇನಿದೆ Bolshevistಗೆ ? ..ಅಜ್ಜನ ದುಡ್ಡು . ನನ್ನದೂ ಅಂತ ಹಕ್ಕಿನಿಂದ ಉಪಯೋಗಿಸೋದಿಲ್ಲೇನು ನಾನು ? ಗಂಡನ ದುಡ್ಡಿನಿಂದ ಮನೆಯನ್ನು ಅಂದಚೆಂದವಾಗಿ ಸಾಗಿಸೋ ಹೆಂಡಂದಿರೆಲ್ಲಾ Bolshevismದ ಪ್ರಚಾರಕರು ಅಂತ ನಾ ಮೊನ್ನಿನ ಸಭಾದೊಳಗ ಹೇಳಲಿಲ್ಲ ?

**ಸುಬ್ಬಣ್ಣ :—** ( ಸೋಗಿನಿಂದ ಹೆದರಿಸುತ್ತ ) ಶ್ ಶ್. ..ಮ್ಯಾಲೆ ಅಜ್ಜ ಇದ್ದಾರ! ....ಕೇಳಿಸಿತೂ ಅಂದ್ರೆ—

**ಮಂದಾಕಿನಿ :—** ( ಸಿಡುಕಿನಿಂದ ) ಅಜ್ಜ—ಅಜ್ಜ ( ಎಂದು ಅವನನ್ನು ಅಣಕಿಸುವಳು )

( ಅಟ್ಟದ ಮೇಲಿನಿಂದ ' ಮಂದಾ, ಮಂದಾ ' ಎಂದು ದನಿ )

**ಸುಬ್ಬಣ್ಣ** :— ( ಅದನ್ನು ಕೇಳಿ ಎದ್ದು ) ಆಗಲಿ ಹಾಗಾದರೆ ನಾಳೆ ಭೆಟ್ಟಿ ಆಗೋಣ—

**ಮಂದಾಕಿನಿ**:— ( ಕೆಣಕುವ ದನಿಯಲ್ಲಿ ) ಯಾರ ತಜ್ಜಗ ಯಾರು ಹೆದರ ಬೇಕು—ಅಂತೀನಿ. ( ಅವನು ಹೊರಡಬೇಕೆನ್ನಲು ) ನಮ್ಮ ಅಜ್ಜನ ಗುರುತು ಮಾಡಿಕೊಂಡರೆ ಚಹಾನೂ ಸಿಗ್ತದೆ, ಕೂಡಿರಲ್ಲ ಒಂದಿಷ್ಟು. ( ಮೇಲಿನಿಂದ ದನಿ, ' ಏನು ಹೋದೀತು, ಇನ್ನು ಬರಲಿ ಅಹುದಲ್ಲಿ ಮಂದಾ ? ' )

**ಮಂದಾಕಿನಿ**.— ( ಅನುಮಾನಿಸುವ ಸುಬ್ಬಣ್ಣನಿಗೆ ) ಕೂಡಿರಿ ಅಂದ್ರೆ—! ( ಅವನು ಕೂಡಲು ) ಅಯ್ತು, ಅಜ್ಜ, ಎಲ್ಲಾ ತಯಾರಿ ಆಗೇದ.

[ ' ನೋಡು ಮತ್ತೆ, ಆಗೇದೋ ಇಲ್ಲೊ ? ಇಲ್ಲಾ ಅಂದ್ರೆ ಕಣ್ಮುಚ್ಚಿಕೊಂಡು ಬರ್ತೀನಿ ' ಎಂದು ಗಪಗಪಿಸಿ ನಗುತ್ತ ಅಜ್ಜ—ಪಾಂಡಪ್ಪನವರು—ಕೆಳಗಿಳಿದು ಬರುವ. ಕೆಳಗೆ ಬಂದವನೆ ಅತ್ತಿತ್ತ ನೋಡಿ ಕಣ್ಣೊರಸಿಕೊಳ್ಳುತ್ತ ' ಇದೇನು ನನ್ನ ಮನೆಯೊ ? ಏನು ಮಲಗಿದ ಮುದುಕಗೆ ಸ್ವರ್ಗದಲ್ಲಿ ಎಚ್ಚರಾಯಿತೊ ? ' ಎಂದು ಕೆಣಕುವ ದನಿಯಲ್ಲಿ ನುಡಿಯುತ್ತ ಬಂದು ಎದ್ದು ನಿಂತ ಸುಬ್ಬಣ್ಣನನ್ನು ನೋಡಿ ನಗೆಯಾಟದ ಕಳೆಯನ್ನು ಬಿಟ್ಟು ಒಮ್ಮೆಲೆ ಗಂಭೀರನಾಗುವನು. ]

[ ಸುಬ್ಬಣ್ಣನು ಅಜ್ಜನನ್ನೇ ಒಪ್ಪಿಸುವನು ಸುಮಾರು ೬೮ ವಯಸ್ಸಿನ ಮುದುಕ. ತಲೆಗೂದಲು, ಮೀಸೆ ಬೆಳ್ಳಗಾಗಿವೆ ; ಬೆನ್ನು ಬಾಗಿಲ್ಲ ; ತುಸು ಎತ್ತರ ಆಳು ; ಮೈಕಟ್ಟು ತೋರಿಕೆಗೆ ಇನ್ನೂ ಸದೃಢವಿದೆ ; ಬನಿಯನ್ ತೊಟ್ಟಿದ್ದಾನೆ ; ಕಣ್ಣುಗಳಲ್ಲಿ ಹುಡುಗನ ಕಿಡಿಗೇಡಿತನದ ಕಳೆ ಇದೆ, ಕಣ್ಣು ನಗುತ್ತವೆ ಏನೊ ಎಂದೆನ್ನಿಸುವುದು ; ಇಡಿಯ ಮುಖವೆ ಯಾವಾಗಲೂ ನಗೆಯಿಂದ ಬೆಳಗಿರುವುದು. ]

**ಮಂದಾಕಿನಿ** :— ( ಅಜ್ಜನಿಗಾಗಿ ಕುರ್ಚಿಯನ್ನಿರಿಸುತ್ತ ) ಅಜ್ಜ, ಇವರು ಶ್ರೀಯುತ ಸುಬ್ಬಣ್ಣ ಅವರು.

**ಅಜ್ಜ** :—( ಒಮ್ಮೆ ಅವನನ್ನು ನೋಡಿ, ಮಂದಾಕಿನಿಗೆ ) ನಿನ್ನ ಸ್ನೇಹಿತರೇನು? ( ಅವಳು ತಲೆತೂಗುವಳು ) ದಿನಾಲು ನಮ್ಮ ಮನೀಗೆ ಬಂದು ಹೋಗ್ತಿರತಾರೇನು ? (ಮತ್ತೆ ತಲೆತೂಗುವಳು. ಸುಬ್ಬಣ್ಣನನ್ನು ನೋಡಿ) ಕೂತುಗೋರಿ. (ಅವನು ಕೂಡಲು) ಮೊದಲಿಗೇ ಒಂದ್ಮಾತು ನಿಮಗೆ ಹೇಳಿ ಬಿಡ್ತೀನಿ....ನನಗ ' ನೀವು, ತಾವು ' ಅಂತ ಬಹಳ ಹೊತ್ತು ಮಾತಾಡ್ಲಿಕ್ಕೆ ಬರೋದಿಲ್ಲ....ದಿನಾಲು ಬಂದು ಹೋಗುವವರಿಗೆ ' ನೀನು ' ಅನ್ನದೆ ಗತೀನೇ ಇಲ್ಲ....ನಡಿದೀತಿಲ್ಲೊ ನಿನಗ, ಸುಬ್ಬಣ್ಣ?

ಆಂ. (ಸುಬ್ಬಣ್ಣನು ಹುಚ್ಚು ನಗೆಯನ್ನು ನಗಲು) ನನ್ನ ಸ್ವಭಾವ ಅದು.. ಇಂಥಾ ನನ್ನ ಸ್ವಭಾವಕ್ಕಾಗಿಯೇ ಜನರು ನನಗ ಪಿತ್ತದ ಪಾಂಡಪ್ಪ ಅಂತಾರ! ಹಹ!

**ಮಂದಾಕಿನಿ :—** ಇವರು ಕಾಂಗ್ರೆಸಿನೊಳಗ ಇದ್ದಾರ, ಅಜ್ಜ

**ಅಜ್ಜ :—** (ಅವರನ್ನ ನೋಡುತ್ತ) ಹುಂ—

**ಮಂದಾಕಿನಿ :—** ಮುಂದಾಳು ಇದ್ದಾರ—

**ಅಜ್ಜ :—** ಕಾಂಗ್ರೆಸ ಅಂದಮ್ಯಾಲೆ ಆಯ್ತಲ್ಲ ಮುಂದಾಳು ಇರಲಿಕ್ಕೇ ಬೇಕು. ಅಲ್ಲೇನು, ಸುಬ್ಬಣ್ಣ?

**ಸುಬ್ಬಣ್ಣ .—** (ವಿನಯದಿಂದ) ಛೇ–ಛೆ–ನಾಯೇನು ಮುಂದಾಳು ಅಲ್ಲ—

**ಅಜ್ಜ :—** ಅಲ್ಲ ಅಂದ್ರ ಹ್ಯಾಗೆ? ಮುಂದಾಳ ಹೊರತು ಇದ್ದಾರ್ಯಾರು ಕಾಂಗ್ರೆಸದಾಗ? ಏನಂತೀ ಸುಬ್ಬಣ್ಣ? ಹಹ!

**ಮಂದಾಕಿನಿ :—** (ಸುಬ್ಬಣ್ಣನಿಗೆ) ನಮ್ಮ ಅಜ್ಜನ ಸ್ವಭಾವ ಅದು. ಎಲ್ಲಾವರೂ ಒಂದು ವಿಲಕ್ಷಣ ಮಾತು ಆಡೋದು.

**ಅಜ್ಜ :—** ಅದಕ್ಕೇ ಪಿತ್ತದ ಪಾಂಡಪ್ಪ! ಹಹಹ! (ಗಹಗಹಿಸುತ್ತ) ಏನಂತೀ ಸುಬ್ಬಣ್ಣ?

**ಮಂದಾಕಿನಿ .—** ನಾನಿನ್ನು ಚಹಾದ ವ್ಯವಸ್ಥಾ ಮಾಡತೀನಿ. ಸುಬ್ಬಣ್ಣವರಿಗೆ ಸಭಾಕ್ಕ ಹೋಗ್ಬೇಕಾಗೇದ.

**ಅಜ್ಜ :—** ಬಿಂದೂ ಎಲ್ಲಿದ್ದಾನೆ?

**ಮಂದಾಕಿನಿ :—** ಅಪ್ಪನ್ನೂ ಕರಕೊಂಡು ಬರ್ತೀನಿ (ಬಲಬಾಗಿಲಿನಿಂದ ಒಳಗೆ ಹೋಗುವಳು)

**ಸುಬ್ಬಣ್ಣ :—** (ಕೆಲಹೊತ್ತು ಏನು ಮಾತಾಡಬೇಕೆಂಬುದು ತಿಳಿಯದೆ ಕೊನೆಗೆ) ಬಿಂದೂರಾಯರು ಈಹೊತ್ತು ಬಹಳೇ ಉತ್ಸಾಹದಲ್ಲಿದ್ದಾರೆ.

**ಅಜ್ಜ :—** ಆಂ—? ಏನು? ಯಾವ ಬಿಂದೂರಾಯರು?

**ಸುಬ್ಬಣ್ಣ :—** ಇವರೇ....ನಿಮ್ಮ—

**ಅಜ್ಜ·—** ಹಾಂ ಹಾಂ....ನಮ್ಮ ಬಿಂದೂನ?....ಯಾಕೆ? ಏನಾಗೇದ ಅವನಿಗೆ?

**ಸುಬ್ಬಣ್ಣ** :— ( ನಗೆಯಿಂದ ) ಈಹೊತ್ತು ಅವರ ಹೊಸ ಕಾದಂಬರಿಯ ವಿಮರ್ಶಾ ಪ್ರಸಿದ್ಧ ಆಗೇದ.

**ಅಜ್ಜ** :— ( ಆಶ್ಚರ್ಯದಿಂದ ) ವಿಮರ್ಶಾ ! ಈಗ ಅದನ್ನೂ ಬರೆಯಲಿಕ್ಕೆ ಪ್ರಾರಂಭ ಮಾಡಿರುವ್ನೇನು ?

**ಸುಬ್ಬಣ್ಣ**:— (ನಕ್ಕು) ಛೆ! ಛೆ! ಅವರು ಯಾಕೆ ಬರೀತಾರೆ ತಮ್ಮ ಪುಸ್ತಕದ ವಿಮರ್ಶಾ ? ಈಗ ಅವರ ಪುಸ್ತಕಗಳ ಪ್ರಚಾರ ಬಹಳ ಆಗೇದ....ನಮ್ಮ ಪ್ರಾಂತದೊಳಗ Socialismದ ಪ್ರಚಾರ ಅವರಷ್ಟು ಯಾರೂ ಮಾಡಿಲ್ಲ ಅನ್ನಬಹುದು.

**ಅಜ್ಜ** :—ಹಹಹ ! ಅದನ್ನೂ ನಡಿಸ್ಯಾನೇನು ? ತಾನು ಮಾಡೋದನ್ನ ಮುಂದಿಗೂ ಮಾಡಲಿಕ್ಕೆ ಹಚ್ಯಾನೇನು? ಹಹಹ ! ಇಲ್ಲಾ ಅಂದ್ರೆ— ಅಪ್ಪನ ಗಳಿಕೆ ಮ್ಯಾಲೆ ನಿರುದ್ಯೋಗದಿಂದ ಮೆರೀತಾನ ಅಂತಿದ್ರು.... ಹಹ ! ಅವರ ಬಾಯಿ ಕಟ್ಟಿಬಿಟ್ಟ ಹಾಗಾದರ ?....ಆಂ....? ಮೊದಲಿ ನಿಂದಲೂ ಉಲಕೋಚೀನೇ ಅವನ ಸ್ವಭಾವ....ಹಾಂ ... ( ಏನು ನೆನಪಿಗೆ ಬಂದಂತೆ ) ಅಲ್ಲ—ಈ ಊರೊಳಗ ನೀ ವಕೀಲಿ ಮಾಡ ತೀನೂ ?....ನಿನ್ನ ಹೆಸರೇ ಕೇಳಿದ್ದಿಲ್ಲಲ್ಲ—ಏನು ನಮ್ಮ ಮಾಮಾನ ಗುರುತು ಇದ್ದಿದ್ದಿಲ್ಲೊ ನಿನಗ ?

**ಸುಬ್ಬಣ್ಣ** :— (ನಕ್ಕು) ನಾನು ಈ ಊರಿಗೆ ಬಂದು ಬಹಳ ದಿವಸ ಆಗಿಲ್ಲ

**ಅಜ್ಜ** :— ಅದೇ ಅಂತೀನಿ....ನನಗೊತ್ತಿಲ್ಲದವ್ರು ಯಾರಿಲ್ಲ....ವಕೀಲ ಅಂತ ಹೆಸರು ಇರದಿದ್ದರೂ ಹಾಂಗೇ ನಿನ್ನ ಹೆಸರು ಗೊತ್ತಿರಬಹು- ದಾಗಿತ್ತು—

**ಸುಬ್ಬಣ್ಣ** :—ಹಾಗೆ ಕೇಳಿದರೆ ವಕೀಲಿಗಾಗಿ ನನಗಷ್ಟು ವ್ಯಾಖ್ಯಾನೇ ಇಲ್ಲ—

**ಅಜ್ಜ** :— ಅಂದ್ರೆ—?

**ಸುಬ್ಬಣ್ಣ** :— ನಾನು ಈ ದೇಶಸೇವಾದ ಕೆಲಸಕ್ಕೇ ನಿಂತುಬಿಟ್ಟಿದ್ದೆ.

**ಅಜ್ಜ** :— ( ಆಶ್ಚರ್ಯ ತೋರಿಸಿ ) ಅಂದ್ರೆ ಇಷ್ಟು ದಿವಸ ಏನ್ಮಾಡ್ತಿದ್ದಿ—

**ಸುಬ್ಬಣ್ಣ** ;— ( ಪರಿತಾಪದ ನಗೆಯಿಂದ ) ಈ ಊರಿಗೆ ಬರೋವರೆಗೂ ನಾನು ಹೆಚ್ಚಾಗಿ ಜೇಲಿನಲ್ಲಿಯೇ ಇದ್ದೆ—

**ಅಜ್ಜ** :— ( ಬೆರಗಾದವನಂತೆ ) ಜೇಲಿನಲ್ಲಿಯೇ ? ಯಾಕೆ ? ಏನ್ಮಾಡಿದ್ದಿ ?

**ಸುಬ್ಬಣ್ಣ** :—( ಏನೋ ಏನೋ ಎನ್ನುವಂತೆ ಶಂಖಾಕಾರದಿಂದ ಕೈಬೆರಳುಗಳನ್ನು ತಿರುಗಿಸಿ ) ಸರಕಾರದವರು ಬಂಧಿಸಿದರು, ಜೇಲಿಗೆ ಹೋದೆ.

**ಅಜ್ಜ** :— ಹುಂ ( ಎಂದು ಉಸಿರೆಳೆಯುವನು ) ಮುಂದೆ—

**ಸುಬ್ಬಣ್ಣ** :— (ನಗೆಯಿಂದ) ಮುಂದೇನು ? ಮತ್ತೆ ಸರಕಾರವೇ ನಮ್ಮದಾಯಿತಲ್ಲ ? ಹೊರಗೆ ಬಂದೆ.

**ಅಜ್ಜ** :— ಹುಂ ( ಎಂದು ತುಸು ಹೊತ್ತು ಮೌನದಿಂದಿದ್ದು ಒಮ್ಮೆಲೆ ನಗತೊಡಗುವನು. ಸುಬ್ಬಣ್ಣನು ಏನೂ ತಿಳಿಯದೆ ಪೆಚ್ಚು ಕಳೆಯಿಂದ ತನ್ನನ್ನು ನೋಡಲು ನಗೆಯನ್ನು ತಡೆಯುತ್ತ ) ಅಲ್ಲ—ನಿನ್ನ ಮಾತಿನ ಮೋಜಿಗೆ ನಗೆ ಬಂದಿತು—ಆಂ ?—ಹಿಡಿದರು, ಹೋದಿ—ಬಿಟ್ಟರು, ಬಂದಿ !—ಆಂ ?—ಇದರಕಿಂತ ಸರಕಾರೀ ನೋಕರಿ ಮಾಡೋದೇನು ಕೆಟ್ಟ ಆಗಿತ್ತು ಅಂದೆ—ಆಂ ?—ನನ್ನ ಮಾತು ಹೇಳ್ತೀನಿ—ಬೇಕಾಯ್ತು ನೋಕರಿ ಹಿಡಿದೆ, ಸಾಕಾಯ್ತು ಪೆನ್‌ಶನ್ ಪಡೆದೆ—ಇಷ್ಟರೊಳಗ ದುಡ್ಡು ಗಳಿಸಿಕೊಂಡೆ—ಆಂ ? ಹಹ !—ಆಂ ?

**ಸುಬ್ಬಣ್ಣ** :— (ಬಂದ ಸಿಟ್ಟನ್ನು ತಡೆಯುತ್ತ) ಚಹ ತಂದರು ಕಾಣಿಸ್ತದ ( ಎಂದು ಎದ್ದು ಮೇಜಿನಮೇಲಿನ ಶಿಸಿಸಿನ ಪಾತ್ರೆಗಳನ್ನು ಅತ್ತಿತ್ತ ಸರಿಸ ತೊಡಗುವನು )

[ ಬಲಬದಿಯ ಬಾಗಿಲಿನಿಂದ ಬಿಂದೂರಾಯ ಬರುವನು. ತಲೆಗೆ ಕಪ್ಪುಪಕ್ಕ, ಕೈಯಲ್ಲಿ ವೃತ್ತಪತ್ರಿಕೆ. ಇಡಿಯ ನಾಟಕದಲ್ಲಿ ಬಿಂದೂರಾಯನ ವೈಶಿಷ್ಟ್ಯವೆಂದರೆ ಅವನ ನಡತೆಯಲ್ಲಿರುವ ಅಲಕ್ಷ್ಯ. ಯಾವಾಗಲೂ ಯಾರೊಡನೆಯೂ ಅವನು ಗಮನ ಮಾಡುವಂತೆ ಎನಿಸುವುದಿಲ್ಲ ಮುಖವನ್ನು—ತಪ್ಪಿ—ಮೇಲೆತ್ತಿ ಮಾತನಾಡಿದನೆಂದರೆ ಕೂಡಲೆ ನಾಚಿದವನಂತೆ ಒಮ್ಮೆಲೆ ಕೆಳಗೆ ನೋಡುವನು. ಮಿಕ್ಕವರಿಗೆಲ್ಲ ಇದು ರೂಢಿಯಾಗಿದೆ ಎಂದು ತಿಳಿಯಬೇಕು. ಇವಲ್ಲದೆ ಈಗಾಗಲೇ ಸೂಚಿಸಿದಂತೆ ಕನ್ನಡ ಇಂಗ್ಲಿಶಗಳಲ್ಲಿ ಒಂದೇ ಮಾತನ್ನು ಹೇಳುವುದೂ ಬಿಂದೂರಾಯನ ಪದ್ಧತಿ. ಈಗ ಬಂದವನೆ ಕೋಣೆಯಲ್ಲಿ ಯಾರು ಇದ್ದಾರೊ ಇಲ್ಲವೊ ಎಂಬುದನ್ನರಿಯದವನಂತೆ ಮುಂಬಾಗಿಲಿನ ಕಡೆ ನಡೆದು (ಪ್ರೇಕ್ಷಕರ) ಎಡ (ಹೊರಗಿನಿಂದ ಬರುವಾಗ ಬಾಗಿಲಿನ ಬಲ ) ಬದಿಗೆ ಆಸನವಂತೆ ಮುಂದೆ ಬಂದ ಗೋಡೆಯ ಭಾಗದ ಮೇಲೆ ಕುಳಿತುಕೊಳ್ಳುವನು. ಈಗ ಅವನು ಅಜ್ಜನಿಗೂ ಮತ್ತು ಸುಬ್ಬಣ್ಣನಿಗೂ ತೀರ ಇದಿರಾಗಿದ್ದರೂ ಅವರನ್ನು ನೋಡುವುದೇ ಇಲ್ಲ ಕುಳಿತು ಪತ್ರಿಕೆಯನ್ನು ಬೆರಳು-ಗಳಿಂದ ಬಡೆಯುತ್ತ—]

**ಬಿಂದೂರಾಯ** :— ಎಂತಹ ಹುಚ್ಚು ಅಂತೀನಿ. ಆಂ? ಶುದ್ಧ nonsense! ನಮ್ಮ ಸಮಾಜ ಎಲ್ಲಿ? Socialism ಎಲ್ಲಿ? Poles ಪೋಲ್ಸ್ ಯಾಕೆ? ಕಪೋಲ್ಸ್–apart! ಹಹ! ನಡುವೆ ನಾಲಿಗೆ ಅದೆ! ಆಂ?

**ಸುಬ್ಬಣ್ಣ** :— (ನಗೆಯಿಂದ) Socialism ಅನ್ನೋದು ಪರದೇಶಿ ವಸ್ತು, ಬಿಂದೂರಾಯರ! ಅದಕ್ಕೇ ನಮಗ ಅದು ಬ್ಯಾಡ....

**ಅಜ್ಜ** :— (ಹಿರಿತನದಿಂದ) ನಿನಗ ನೆನಪಿನೊಳಗ ಅದನೊ ಇಲ್ಲೊ, ಸುಬ್ಬಣ್ಣಾ; ೧೯೧೮ ರೊಳಗ ಯುರೋಪದೊಳಗ ಒಂದು ಯುದ್ಧ ಆಯ್ತು, ಆಗ ಪರದೇಶದಿಂದ ಒಂದು ಪಿಡುಗು ಬಂದಿತ್ತು, ಇನ್‌ಫ್ಲುಎಂಝಾ ಅಂತ! ಆಂ— ? ಒಮ್ಮೊಮ್ಮೆ ಅಂಥಾದ್ದೂ ಬೇಕಾಗ್ತದೆ—ಆಂ ?—ಬ್ಯಾಡಾಂದ್ರೆ ಬಿಡೋದಿಲ್ಲ.

**ಸುಬ್ಬಣ್ಣ** — (ಅಭಿಮಾನದ ಪಟದಿಂದ) ಇನ್ನೊಬ್ಬರಿಂದ ಏನೂ ಬೇಕಾಗಿಲ್ಲ ನಮಗ....ನಮ್ಮ ಸಂಸ್ಕೃತಿ ಬೇಕಾದಷ್ಟು ಘನವಂತ ಇದೆ! (ಜೆಸ್ಸಿಗೆ ಕೈ ಕಟ್ಟಿಕೊಂಡು ನಿಲ್ಲುವನು)

**ಬಿಂದು** :— (ಪತ್ರಿಕೆಯುಲ್ಲಿಯ ದೃಷ್ಟಿಯನ್ನಿಟ್ಟು) ಮೂರ್ಖತನ, Stupid! ದಡ್ಡತನ ಏನು, ಹೊಲಸು ಏನು, ಅಲ್ಪಸಂತೋಷ ಏನು ; ಹೇಡಿತನ ಏನು! ignorant, dirty, little minded cowards! ಸಂಸ್ಕೃತಿ ಅಂತ! what a civilization!

**ಸುಬ್ಬಣ್ಣ** :— (ಅಜ್ಜನಿಗೆ) ಅದಕೇ ನಮ್ಮ ಸಂಸ್ಕೃತಿ ಘನವಂತ ಅಂದೆ .. ನಮ್ಮ ದೋಷ ನಾವು ಒಪ್ತೀವಿ ಅಲ್ಲದೆ ಇನ್ನೊಬ್ರಿಂದ ಕಲೀಲಿಕ್ಕೆ ಹಿಂದ್ಮುಂದೆ ನೋಡೋದಿಲ್ಲ.... ಬಿಂದೂರಾಯರು ಅನ್ನೋದೇನು ಪೂರಾ ಸುಳ್ಳಲ್ಲ. ಸಾಹೇಬ್ರಿಂದ ಈ ಹೊತ್ತು ನಾವು ಎಷ್ಟೋ ಸದ್ಗುಣ ಕಲೀತಕ್ಕದ್ದಿದೆ—

**ಅಜ್ಜ** :— (ಆಶ್ಚರ್ಯದಿಂದ) ಏನಂದಿ? ...ಆಂ—?....ಕಾಲಬದಲಾದದ್ದೇನು ಸುಳ್ಳಲ್ಲ. ನೀವೇನ್ಮಾತಾಡ್ತೀರಿ ತಿಳೀನೇವಲ್ಲದು ನನಗ.... ಆಂ ?.... ಸಾಹೇಬ್ರಿಂದ ಕಲಿಯೋದ ?.... (ಸುಬ್ಬಣ್ಣನು ತಲೆ ತೂಗಲು) ನೀ ಮೊದಲು ಕೆಳಗ ಕೂಡು, ಅಂದರ ನನಗ ಮಾತಾಡ್ಲಿಕ್ಕೆ ತ್ರಾಸ ಆಗೋದಿಲ್ಲ.... (ಸುಬ್ಬಣ್ಣನು ಕೂಡುವನು) ಏ ಸುಬ್ಬಣ್ಣಾ, ಈಗಿನ

ಸಾಹೇಬ್ರು ಬದಲಾಗೇರೋ ಏನೋ ನನಗೊತ್ತಿಲ್ಲ.... ಆದ್ರ ನಂ ಕಾಲಕ್ಕ ಮಾತ್ರ ಅವರಿಂದ ಕಲಿಯೋದು ಏನೂ ಇರಲ್ಲಿಲ್ಲ ನೋಡು.... ಯಾವ ಸಾಹೇಬ ಬಂದ್ರೂ ನಾಯೇನು ಧೋತರ ಮೊಚ್ಚೆ ಬಿಡಲಿಲ್ಲ ... ಮಡಿಯೊಳಗಿದ್ದಾಗ ಹೇಳಿಕಳಿಸಿದರ ' ಮಡಿಯೊಳಗಿದ್ದೇನಿ, ತಡೀರಿ ' ಅಂತ ಸ್ಪಷ್ಟ ಹೇಳಿ ಕಳುಹಿಸ್ತಿದ್ದೆ....ಇಷ್ಟು ಯಾಕೆ ಸುಬ್ಬಣ್ಣಾ—ಕೋರ್ಟಿಗೆ ಹೋಗೋದಂದ್ರೆ ವಿಲಾಯತೀ ತನಕ ಕಾಣಿಸೋವಷ್ಟು ಥಾಳ ಅಂಗಾರ ಅಕ್ಷತ ಹಚ್ಚಿಕೋತಿದ್ದೆ—ಅಂದೆ! ಹಹ! ಆಂ? ಹಹ!

[ ಇಷ್ಟರಲ್ಲಿ ಒಳಗಿನಿಂದ ಮಂದಾಕಿನಿ ಬಂದು ಬಾಗಿಲ ಪರದೆಯನ್ನು ಎತ್ತಿ ಹಿಡಿಯುವಳು. ಸುಂದರವಾದ ಟ್ರೇದಲ್ಲಿ ಮಾಟಾದ ಕಪ್ಪು ಬಸಿ-ಕೆಟಲ್‌ಗಳನ್ನು ಇಟ್ಟುಕೊಂಡು ಅನಂತನು ಬರುವನು. ಅನಂತನು ಉದ್ದ—ಪಾದದವರೆಗೆ—ದೋತರವನ್ನುಟ್ಟಿದ್ದಾನೆ. ಮೊದಲಿನಂತೆ ಶರ್ಟು ಇದೆ. ಅಜ್ಜನನ್ನು ನೋಡುತ್ತ ನಡೆದು ಬಂದು ಮೇಜಿನ ಮೇಲೆ ಟ್ರೇ ಇಟ್ಟು ಹೊರಡಲು—]

**ಅಜ್ಜ** :— ನಮ್ಮ ಅನಂತಗ ನೆನಪಿದೆ, ಕೇಳು—ಯಾಕೋ ಅನಂತಾ, (ಆತನು ತಿರುಗಿ ನಿಲ್ಲುವನು) ಆ Blackie ಸಾಹೇಬ ಬಂದಾಗ ಒಂದು ತಾಸು ಅವನ್ನ ಕೂಡಿಸಿ ಕಡೆಗೆ ಒಂದು ಮೂಲಿಯೊಳಗ ಕುರ್ಚಿ ಮ್ಯಾಲೆ ಒಂದು ಕಪ್ಪು ಮಜ್ಜಿಗೆ ಅಳ್ಳಿಟ್ಟೇ ಕೊಟ್ಟಿಟ್ಟಿತು—ಅದೂ ಅನಂತ ಬರೀ ಮೈಲೆ ಲಂಡ ಪಂಜೆ ಉಟ್ಕೊಂಡು ಬಂದು! ಆಂ?.... ಹಹ! (ಅನಂತ ಹೋಗುವನು) ....(ಸುಬ್ಬಣ್ಣನಿಗೆ) ಮತ್ತ ಆ ಸಾಹೇಬ ಹೋದಮ್ಯಾಲೆ ನಾನು—ನಾನು ಚಹಾನೇ ಕುಡಿದೆ—ಆಂ?—ಹಹ.... (ಮಂದಾಕಿನಿಗೆ) ಚಹಾನೇ ಮಾಡೀದಿ ಹೌದಲ್ಲೊ ಮತ್ತೆ....ಹಹ!—ಮುದುಕನ ಹಲ್ಲಿಗೆ ಬರೋದಿಲ್ಲ ಅಂತ ಅಳ್ಳಕ ಅಳ್ಳಿಟ್ಟು—ಹಹಹಹ್ಹ—(ತಾನೇ ಹೆಚ್ಚಾಗಿ ನಗುವನು)

**ಮಂದಾಕಿನಿ** :—(ಕಪ್ಪು ಸಾಸರುಗಳನ್ನು ಸರಿಯಾಗಿ ಇಡುತ್ತ ಕೆಟಲ್‌ದಿಂದ ಚಹವನ್ನು ಸುರುವುತ್ತ) ನಾ ಹೇಳ್ಲಿಕ್ಕೆ ಮರೆತೆ, ಅಜ್ಜ, ನಿಮ್ಮೆದುರು. ನಮ್ಮ ಶ್ರೀಯುತ ಸುಬ್ಬಣ್ಣ ಅವರ ಮುಂದೆ ಸಾಹೇಬರ ಮಾತು ತೆಗೆಯೋ ಹಾಂಗಿಲ್ಲ...ಅವರ ದೇಶಾಭಿಮಾನದ ಕಿಡೀನೇ ಹಾರ್ತಾವ...

**ಅಜ್ಜ** :—ಅಲ್ಲ ನಾವಿಷ್ಟು ಮಾಡಿದ್ದಕ ನಮಗ ಮಾನ ಕೊಡತಿದ್ದರು ಅಂದಿ ಸಾಹೇಬರು—ಯಾಕ ಏನಂತೀ—ಸುಬ್ಬಣ್ಣಾ? ಆಂ?... (ಏನ್ಮಾತಿ ಮಂದಾಕಿನಿಯ ಮಾತು ಲಕ್ಷ್ಯಕ್ಕೆ ಬಾರದು) ಏನಂದಿ? ಸಾಹೇಬ್ರಿಂದ ಎಷ್ಟೋ ಕಲಿತುಕೋಬೇಕಾಗೇದ ಅಂತಿದ್ದ ಸುಬ್ಬಣ್ಣ. ನಾವೇನು ಹಾಂಗ ಮಾಡತಿದ್ದಿಲ್ಲ ಅಂತ ಹೇಳಿದಿ...ಹೌದಲ್ಲಪ ಸುಬ್ಬಣ್ಣಾ? ಆಂ? (ಎನ್ನುತ್ತ ಮಂದಾಕಿನಿಯು ಕೊಟ್ಟ ಕಪ್ಪು ಸಾಸರುಗಳನ್ನು ತೆಗೆದು ಕೊಳ್ಳುವನು).

**ಸುಬ್ಬಣ್ಣಾ** :— (ಮನಸ್ಸಿನಲ್ಲಿ ಕಳವಳ ನಡೆದಿದೆ ಎಂಬುದನ್ನು ಮುಖಲಕ್ಷಣ ದಿಂದಲೂ ದೃಷ್ಟಿಯಿಂದಲೂ ಮಂದಾಕಿನಿಗೆ ತಿಳುಹಿಸುವಂತೆ ಅವಳನ್ನು ನೋಡಿ ನಿರಾಸೆಯಿಂದ ತನಗೆ ಕೊಟ್ಟ ಕಪ್ಪು ಸಾಸರುಗಳನ್ನು ಕೈಚಾಚಿ ತೆಗೆದುಕೊಳ್ಳುವನು)

**ಮಂದಾಕಿನಿ** — (ಬಿಂದೂರಾಯನಿಗೆ) ನಿಮ್ಮ ಚಹ ಅಲ್ಲಿಯೆ ತಂದ್ಕೊಡ್ತ ಲೇನು, ಅಪ್ಪ? (ಎಂದು ಕಪ್ಪು ಸಾಸರುಗಳನ್ನು ಕೈಯಲ್ಲಿ ಹಿಡಿದುಕೊಂಡು ಹೊರಡಲು)

**ಅಜ್ಜ** :— ಅವನೂ ಇಲ್ಲಿಯೇ ಬರ್‍ತಾನ—ಬಾರೊ, ಬಿಡು....ಇಡು... ಕೊಡು. ಮುಂದೂ ಇಡಿಯ ಒಂದು ವರ್ಷದ ಮಾತುಕತೆ ನಿನ್ನೊಡಿ ಆಡ್ಬೇಕಾಗೇದ. (ಅವಳು ಮುಗುಳ್ನಗೆಯಿಂದ ಅಜ್ಜನ ಎಡಕ್ಕೆ ಕುರ್ಚಿಯಲ್ಲಿ ಕೂತುಕೊಳ್ಳುವಳು)

[ ಬಿಂದೂರಾಯನನ್ನುಳಿದು ಮಿಕ್ಕವರು ಕೆಲಹೊತ್ತು ಚಹ ಕುಡಿಯುತ್ತಲೆ ಮಾತನಾಡುವರು. ]

**ಸುಬ್ಬಣ್ಣಾ** :— (ನಕ್ಕು) ಮಿಸ್ ಮಂದಾಕಿನಿ ಅವ್ರು ಇಡಿಯ ವರ್ಷ ನಿಮ್ಮ ಸಲುವಾಗಿಯೆ ಮಾತಾಡತಿದ್ದರು—ಎಂಟು ತಿಂಗಳಮಟ್ಟಿಗಂತು ನಾನೇ ಸಾಕ್ಷಿ.

**ಅಜ್ಜ** :— (ಅವಳನ್ನು ನೋಡುತ್ತ) ಹೌದೇನು? (ಅಕೆ ನಾಚಿ ಕೆಳಗೆ ಮುಖ ಮಾಡಲು) ಎಲ! ಹುಚ್ಚೀ!

**ಸುಬ್ಬಣ್ಣಾ** :— ಅಲ್ಲ—ನನಗ ಒಂದು ಆಶ್ಚರ್ಯ....ಮೊಮ್ಮಗಳು ಅಂದ್ರ ಇಷ್ಟು ನಿಮಗೆ ಪ್ರಾಣ....ಹೀಗಿದ್ದರೂ ನೀವು ಇಡಿಯ ಒಂದು ವರ್ಷ ಯಾತ್ರಾ ಅಂತ ಹೋದಿರಲ್ಲ!

**ಅಜ್ಜ** :— (ತಿನಿಸಿನಿಂದ ಬಾಯಿ ತುಂಬಿ) ಹುಂ—?

**ಸುಬ್ಬಣ್ಣ** .— ( ಮಂದಾಕಿನಿಯು ಸಿಟ್ಟಿನಿಂದ ತನ್ನನ್ನು ನೋಡುವುದನ್ನು ಕಂಡು ಕೆಣಕುವ ನಗೆಯಿಂದ ) ನೀವಾದರೂ ಅಷ್ಟೊಂದು ಧರ್ಮ, ಪುಣ್ಯ, ಕ್ಷೇತ್ರದರ್ಶನ ಅಂತ ಅನ್ನುವವರಲ್ಲ ಆತ ಕಾಣಿಸ್ತದೆ? ಅದಕ್ಕ ಕೇಳಿದೆ.

**ಮಂದಾಕಿನಿ** :— ( ಅಗುಬಗೆಯಿಂದ ) ಅಯ್ಯೊ, ಈ ಚಹ ಆರಿ ಹೋದೀತು ( ಎಂದು ಬಿಂದೂರಾಯನಿಗಾಗಿ ಚಹವನ್ನು ತೆಗೆದುಕೊಂಡು ಏಳುವಳು )

**ಬಿಂದೂರಾಯ** :— ( ಬಿಸ್ಮಿತ ) Humbug! ಮೋಸ ಇದು! ಎಂಥಾ ಮುಂದಾಳುಗಳೊ! ಜಾತಿಭಾವನಾ ಹೋಗ್ಬೇಕಂತ! ಛೀ— no psychology! what leaders!

**ಮಂದಾಕಿನಿ** :— ( ಅವನ ಹತ್ತಿರ ಬಂದು ಚಹವನ್ನು ನೀಡುತ್ತ) ಚಹ ಇಡ್ತೀನಿ. ಇಕ್ಷಿ, ಅಪ್ಪಾ.

**ಬಿಂದೂರಾಯ** .— ಕೇಳಿದೇನು, ಮಂದಾ? ಜಾತಿ ಹೋಗದೇ ಜಾತಿ ಭಾವನಾ ಹೋಗ್ಬೇಕಂತ! It won't—It won't go at all! ನಾನಂ ಹೆಸರಿನೊಳಗೇ ನಂ ಜಾತಿ ಇದೆ · ಹೆಸರು ಹೋಗದೇ ಜಾತಿ ಹೋಗೋದೇ ಇಲ್ಲ! ಆಂ? No name, no caste! ಹೌದು— good! ( ಎಂದವನೆ ಎದ್ದು ತನ್ನ ಬಲಕ್ಕಿದ್ದ ಅಟ್ಟದ ಪಾವಟಿಗೆಗಳನ್ನು ಹತ್ತುವನು. ಅಜ್ಜ–ಸುಬ್ಬಣ್ಣ ಮತ್ತೆ ತಿರುಗಿ ಅವನನ್ನು ನೋಡುವರು. )

**ಮಂದಾಕಿನಿ** .— ಚಹ ಕುಡಿದು ಹೋಗ್ಬಾರ್ದೆ, ಅಪ್ಪ, ಅಪ್ಪಾ!

**ಬಿಂದೂರಾಯ** .— (ತಿರುಗಿ ನಿಂತು) ಅಪ್ಪಾ! That's good! ಅಪ್ಪ— ಅಜ್ಜ—ಅಣ್ಣ—ತಮ್ಮ ಹೀಗೇ ಹೆಸರಿಡ್ಬೇಕು—ಅಂದ್ರೆ ಜಾತಿ ಹೋಗಿ—yes— ಹೌದು!— family names all must have! ಆಂ? ( ಎನ್ನುತ್ತ ಅವಸರವಸರವಾಗಿ ಪಾವಟಿಗೆ ಹತ್ತಿ ಹೋಗುವನು. )

**ಸುಬ್ಬಣ್ಣ** :— ( ನಕ್ಕು ) ಇದು ಮತ್ತೊಂದು ಕಾದಂಬರಿ ಬರಿಯೋ ತಯಾರಿ ಕಾಣ್ತದ!

[ ಮಂದಾಕಿನಿ ಸಾವಕಾಶ ಹೆಜ್ಜೆಗಳನ್ನಿಡುತ್ತ ಮೇಜಿನ ಕಡೆಗೆ ನಡೆಯುವಳು ]

**ಅಜ್ಜ** :— ಸಣ್ಣವ ಇದ್ದಾಗಿನಿಂದ ಉಲಕೋಚಿ ಅಂತ ಹೇಳಲಿಲ್ಲ? ಮನೆಗೆ ಒಬ್ಬನೇ ಮಗ—ಆಡಲಿಕ್ಕೆ ಮಾತಾಡ್ಲಿಕ್ಕೆ ಇನ್ನೊಬ್ಬರಿದ್ದಿಲ್ಲ....

ಹೌದಲ್ರೊ, ಸುಬ್ಬಣ್ಣಾ ? ಎರಡು ಊಟದ ನಡುವೆ ಹೊತ್ತು ಹ್ಯಾಂಗ ಕಳೀಬೇಕು ? ಆಂ ?

**ಮಂದಾಕಿನಿ** .— ( ಒಳಬಾಗಿಲ ಕಡೆಗೆ ನೋಡುತ್ತ ) ಅನಂತಾ—ಅನಂತಾ—
( ಅವನು ಬರಲು ಚಹದ ಕಪ್ಪನ್ನೂ ಕೆಲವು ತಿನಿಸುಗಳನ್ನಿಟ್ಟ ಪ್ಲೇಟನ್ನೂ ಅವನ ಕೈಗೆ ಕೊಟ್ಟು ) ಮ್ಯಾಲೆ ರಾಯರಿಗೆ ಕೊಟ್ಟು ಬಾ—( ಅವನು ಮೇಲೆ ಹೋಗುವನು )

**ಅಜ್ಜ** :— ( ತನ್ನ ಮಾತನ್ನ ಮುಂದರಿಸುತ್ತ ) ಎರಡು ಊಟದ ನಡುವೆ ಹೊತ್ತು ಹ್ಯಾಂಗ ಕಳೆಯಬೇಕು ಅನ್ನೋದಕ್ಕೇ ನಾನು ಯಾತ್ರಾ ಅಂತ ಹೊರಟಿದ್ದು.

**ಸುಬ್ಬಣ್ಣ** .— ( ನಗೆಯಿಂದ ) ಅದೇ ಹೇಳಿದೆನಲ್ಲ—ನನಗ ಅದು ಆಶ್ಚರ್ಯ ಅಂತ.

**ಮಂದಾಕಿನಿ** .— ( ಇಬ್ಬರಿಗೂ ) ಚಹ ಬೇಕೇನು ಇನ್ನಿಷ್ಟು ?
( ಇಬ್ಬರೂ ಕಪ್ಪುಗಳನ್ನು ಮುಂದೆ ಸರಿಸುವರು. ಮಂದಾಕಿನಿಯು ಚಹ ತುಂಬುವಳು. ಅಜ್ಜನು ಮುಂದಿಟ್ಟುಕೊಂಡು ಚಹವನ್ನು ಕುಡಿಯುತ್ತ ಮತ್ತೆ ಮಾತನ್ನು ಮುಂದೆ ಸಾಗಿಸುವನು )

**ಅಜ್ಜ** :— ( ಸುಬ್ಬಣ್ಣನಿಗೆ ) ಅಂದ್ರ ನನ್ನಂಥಾ ಮುದುಕ ಏನ್ಮಾಡ ಬೇಕಾಗಿತ್ತು ಅಂತೀ ?

**ಸುಬ್ಬಣ್ಣ** .—( ಉಪನ್ಯಾಸದ ಶೈಲಿಯಲ್ಲಿ ) ಮುದುಕ—ತರುಣ—ಬಡವ—ಶ್ರೀಮಂತ—ಯಾರೇ ಆದ್ರೂ ನಮ್ಮ ದೇಶದವರಿಗೆ ಮಾಡೋದು ಒಂದೇ ಒಂದು ಕೆಲಸ ಇದೆ.

**ಅಜ್ಜ** :— ಏನೊ—ಅದು ಸುಬ್ಬಣ್ಣ ?

**ಸುಬ್ಬಣ್ಣ** :— ಗಳಿಸಿದ ಸ್ವಾತಂತ್ರ್ಯ ಉಳಿಸಿಕೊಳ್ಳೋದು.

[ ಮಂದಾಕಿನಿ ಆಶ್ಚರ್ಯದ ದೃಷ್ಟಿಯಿಂದ ಅಜ್ಜನನ್ನು ನೋಡುವಳು, ಸುಬ್ಬಣ್ಣನು ಆಹ್ವಾನವಿತ್ತವನಂತೆ ಮುದುಕನನ್ನು ಇದಿರಿಸುವನು. ಮುದುಕನು ಮತ್ತೆ ಯಾವುದನ್ನೂ ಲಕ್ಷಿಸದೆ ತುಸು ಮೇಲೆ ನೋಡುತ್ತ ಯಾವುದೋ ಧ್ಯಾನದಲ್ಲಿ ಇದ್ದಂತಿದ್ದಾನೆ. ಒಂದೆರಡು ನಿಮಿಷ ಯಾರೂ ಮಾತನಾಡುವುದಿಲ್ಲ ]

**ಅಜ್ಜ** :— ( ಇನ್ನೂ ಹಾಗೆಯೆ ನೋಡುತ್ತ, ಅರ್ಧ ತನ್ನಷ್ಟಕ್ಕೆ ಎಂಬಂತೆ, ಸಾವಕಾಶವಾಗಿ ಶಬ್ದಗಳನ್ನು ಬಿಡಿಬಿಡಿಸಿ ಮಾತನಾಡುತ್ತ ) ಉತ್ತರ

ಹಿಂದುಸ್ತಾನದೊಳಗ ಮಿಠಾಯಿ ರೂಢಿ ಬಹಳೇನೋ! ಯಾವ ಮೊಡ್ಡ ಊರೇ ಇರಲಿ, ಮಿಠಾಯಿ ಅಂಗಡಿಗಳ ಸಾಲು ಇಲ್ಲದೆ ಪೇಟೇನೆ ಇಲ್ಲ....ಪ್ರತಿಯೊಂದು ಕಡೆ ಅದೇ ದೃಶ್ಯ!. .ಅಂಗಡಿಯೊಳಗ ಮುಂದಿನ ಸಾಲು ಮಿಠಾಯಿದ್ದು....ಮಿಠಾಯಿ ತುಂಬಿ ನೊಣ!... ನೊಣ ಅಂದೆ!. ..ಹುಬ್ಬೇಹೂಬ ನಮ್ಮೂರ ಮಿಠಾಯಿ ಅಂಗಡಿ ಹಾಂಗೇ--ಅಂಥಾವೇ ತುಂಬಿ ನೊಣ ಅಂದೆ! ಅವನ್ನು ನೋಡಿನೋಡಿದ್ದಾಂಗ ನಮ್ಮದೂ ಇದೂ ಒಂದೇ ದೇಶ ಅನ್ನಿಸ-ತಿತ್ತು !.... ( ತುಸು ಹಾಗೇ ದಿಟ್ಟಿಸಿ, ಉಸಿರೆಳದು, ಒಳಗಿಂದೊಳಗೆಯೇ ತಮ್ಮ ಕಳಕಳಿಯನ್ನು ಮುಚ್ಚುವ ನಗೆಯಿಂದ) ಆಂ ? . ಹೌದು ನೋಡು, ಸುಬ್ಬಣ್ಣಾ....ಮೊದಲು ನಮ್ಮದು ದೇಶ, ಒಂದೇ ದೇಶ ಅಂದ್ರ ಯಾವುದು ಅಂತ ತಿಳಿಯೋದು ಮುಖ್ಯ—ಆಂ ? ( ಎಂದು ಮಂದಾಕಿನಿಯನ್ನು ನೋಡುವಾಗ ಆವಳು ಹಾಂಗ ತಿಳಿಯದಂತ ಕಣ್ಣಲ್ಲಿ ತಡೆದು ನಿಂತ ಹನಿಯನ್ನು ಸೆರಗಿನಿಂದ ಒರೆಸುವ ಯತ್ನದಲ್ಲಿದ್ದುದನ್ನು ಕಂಡು) ಮುದುಕ ಆದೆ--ನನಗ ತಿಳಿದು ಏನು ಉಪಯೋಗ ? ಆ? ( ಸುಬ್ಬಣ್ಣನನ್ನು ನೋಡಿ) ಬಹಳ ಅಂದ್ರೆ, ಪಾಂಡಪ್ಪನ ಹಿತ್ತ ಇಳಿಯ ಬಹುದು ಅಂದೀ ನೀನು, ಯಾಕೊ ಸುಬ್ಬಣ್ಣ ?

**ಸುಬ್ಬಣ್ಣ .—** ( ಸಾತಿಲ್ಲದ ಎದ್ದು ಕೈಗಡಿಯಾರವನ್ನು ನೋಡಿಕೊಂಡು ) ನನಗಿನ್ನು ಹೊತ್ತಾಯಿತು, ( ಮಂದಾಕಿನಿಯನ್ನು ನೋಡಿ ) ತಡಾನೇ ಆಗಬಹುದು ಇನ್ನಿಷ್ಟು ತಡೆದರೆ--(ಅಜ್ಜನಿಗೆ) ಈಗ ಸಭಾಕ್ಕ ಹೋಗ್ಬೇಕಾಗೇದ, ಪಾಂಡಪ್ಪನವರ ...ಬರ್ತೀನಿ ನಾಳೆ ( ಎಂದು ಹೊರಡುವನು )

**ಅಜ್ಜ :—** ಸಭಾ ಮುಗಿದ ಮ್ಯಾಲೆ ಬಾರಲ್ಲೊ, ಸುಬ್ಬಣ್ಣ-- ( ಸುಬ್ಬಣ್ಣನು ತಿರುಗಿ ನಿಂತು ಏನು ಹೇಳಬೇಕೆಂಬ ಯೋಚನೆಯಲ್ಲಿದ್ದಾಗ) ಮತ್ತ--ಮುದುಕನ ಜೋಡಿ ಹರಟೆ ಹೊಡೆಯೋದು ಬೇಜಾರ ಅನ್ನಿಸ-ದಿದ್ದರೆ--ಆಂ ?

**ಮಂದಾಕಿನಿ :—** ( ನಗೆಯಿಂದ) ನಮ್ಮ ಶ್ರೀಯುತ ಸುಬ್ಬಣ್ಣ ಅವರಿಗೆ ಬೇಜಾರ ಅನ್ನೋದು ಇಲ್ಲ... ಲೆಕ್ಚರ ಕೇಳೋ ಮಂದಿ ಇದ್ದರೆ ಸಾಕು...

**ಅಜ್ಜ** :— ( ಮಂದಾಕಿನಿಗೆ ) ನಿನಗೂ ಹೋಗ್ಬೇಕಾಗಿದೆಯೇನು, ಮಂದೂ ? ( ಆಕೆ ತಲೆ ಅಲ್ಲಾಡಿಸಲು ) ಹೋಗೋದಿದ್ದರೆ ಹೋಗಿ ಬಾ.... ( ಸುಬ್ಬಣ್ಣನಿಗೆ ) ನೀವು ಹ್ಯಾಂಗ ಲೆಕ್ಚರು ಕೊಡತೀರೋ ಏನೊ ?

**ಸುಬ್ಬಣ್ಣ** :— ( ನಿಂತು ) ಮಿಸ್ ಮಂದಾಕಿನಿಯವರ ವಿನೋದ ಅದು— ನಾವು ಬರಿಯ ಲೆಕ್ಚರು ಕೊಡ್ತೀವಿ ಅನ್ನೋದಕ್ಕ ...ಅದಕ್ಕೇ ನಾವು ಈಗ ಲೆಕ್ಚರ ಬಿಟ್ಟು ವಿಧಾಯಕ ಕಾರ್ಯಕ್ರಮ ಕೈಕೊಂಡೀವಿ....

**ಅಜ್ಜ** :— ( ತಿಳಿಯದವನಂತೆ ) ವಿಧಾಯಕ ಲೆಕ್ಚರು ಅಂದ್ರೇನು ಮತ್ತೆ ?

**ಸುಬ್ಬಣ್ಣ** :— ( ನಕ್ಕು ) ವಿಧಾಯಕ ಅನ್ನೋದು ಕಾರ್ಯ. ಅದಕಾಗಿ ಲೆಕ್ಚರ ಅಲ್ಲ....ಆದರ ಯಾವ ಕಾರ್ಯ ಮಾಡಲಿಕ್ಕೂ ಹಣ ಮುಖ್ಯ....ಈಗ ಲೆಕ್ಚರು ಕೊಡೋದು ಹಣ ಕೂಡಿಸುವುದರ ಸಲುವಾಗಿ ...

**ಅಜ್ಜ** — ಹಣ ಕೂಡಿಸೋದು ವಿಧಾಯಕ, ಅದನ್ನ ಖರ್ಚು ಮಾಡೋದು ವಿಘಾತಕ ಕಾರ್ಯಕ್ರಮ ಅನ್ನಿರಿ. ..ಆಂ?....ಹಹ....( ಮಂದಾಕಿನಿಯು ಗಟ್ಟಿಯಾಗಿ ನಗಲು ತಾನೂ ನಗುವನು. ಸುಬ್ಬಣ್ಣನು ತುಟಿ ನೊಂದು-ಕೊಂಡುದನ್ನು ಕಂಡು ಮಂದಾಕಿನಿಯು ನಗುವನ್ನು ತಡೆಯುತ್ತ—)

**ಮಂದಾಕಿನಿ** :— ( ಸುಬ್ಬಣ್ಣನಿಗೆ ) ಸಭಾ ಮುಗಿದ ಕೂಡಲೆ ಇಲ್ಲೇ ಯಾಕೆ ಬರಬಾರದು ನೀವು ? ಅಂದ್ರೆ—

**ಸುಬ್ಬಣ್ಣ** :— ಆಗಲಿ—ಆಗಲಿ— ಇಲ್ಲಿ ಒಂದೇ ಹೋಗ್ತೇನಿ. ( ಎಂದು ಮುಂಬಾಗಿಲಿಂದ ಹೋಗುವನು )

[ ಮಂದಾಕಿನಿಯು ಏಳುತ್ತ ಮೇಜಿನ ಮೇಲಿನ ವಸ್ತುಗಳನ್ನು ಸಾವರಿಸು-ವಳು ಕೆಳಗೆ ಮುಖ ಮಾಡಿ ಅವಳು ಈ ಕಾರ್ಯದಲ್ಲಿ ತೊಡಗಿದಾಗ ಅಜ್ಜನು ಕುತೂಹಲ ದೃಷ್ಟಿಯಿಂದ ಒಂದೇಸವನೆ ಆವಳನ್ನು ನೋಡುತ್ತಿರುವನು. ]

**ಅಜ್ಜ** :— ( ಒಮ್ಮೆಲೆ ) ಮಂದೂ—

**ಮಂದಾಕಿನಿ** :— ( ಯಾವುದೋ ವಿಚಾರದಿಂದ ತಟ್ಟನೆ ಎಚ್ಚೆತ್ತವಳಂತೆ ) ಆಂ ?....ಆಂ—ಏನು, ಅಜ್ಜ ?

**ಅಜ್ಜ** :— ಕೂಡು.... ( ಆಕೆ ಏನೂ ತಿಳಿಯದೆ ತನ್ನನ್ನು ನೋಡಲು ) ಕೆಲಸ ಅಂದರೆ ಅನಂತ— ( ತನ್ನ ಮಾತಿನ ಚಮತ್ಕೃತಿಗೆ ತಾನೇ ನಕ್ಕು ) ಆಂ ?—ಹಹ! ಹೌದಲ್ಲೊ?—ಕೂಡು....( ಆಕೆ ಕೂಡಲು ) ನೀನು–

ನೀನೂ—ಛೆ! (ಎಂದು ಮೇಜಿನ ಮೇಲೆ ಕೈಗಳನ್ನು ಬಡಿದು ತಟ್ಟನೆ ಎದ್ದು ಬೆನ್ನಿಗೆ ಕೈಕಟ್ಟಿಕೊಂಡು ಮುಂಬಾಗಿಲಿನ ಕಡೆಗೆ ನಡೆದು ಹೋಗುವನು. ಮಂದಾಕಿನಿಯು ತಿಳಿಯದ್ದಕ್ಕೆ ಈಗ ತುಸು ಹೆದರಿದ ಕಳೆಯಿಂದ ಅವನನ್ನು ಒಂದೇಸವನೆ ಮುಖ ತಿರುಗಿಸಿ ಕೂತಲ್ಲಿಂದಲೆ ದಿಟ್ಟಿಸುವಳು. ಅವನು ಪರದೆಯನ್ನು ಬದಿಗೆ ಸರಿಸಿ ಹೊರಗೆ ನೋಡುತ್ತ—ಎಡಗೈಯನ್ನು ಜೆನ್ನು ಮೇಲೆಯೆ ಇಟ್ಟುಕೊಂಡು—ಹೊರಗೇ ದಿಟ್ಟಿಸುತ್ತ ನಿಲ್ಲುವನು.)

[ಕೆಲಹೊತ್ತು ನಿಃಶಬ್ದತೆ]

**ಅಜ್ಜ**:— (ಒಮ್ಮೆಲೆ ತಿರುಗಿ ನಿಂತು) ಮಂದೂ, ನೀನೂ ದೇಶಸೇವಾದ ಕೆಲಸದೊಳಗೇ ಇದ್ದೆಯಲ್ಲ ಇಷ್ಟು ದಿವಸ?

**ಮಂದಾಕಿನಿ**:— (ಏನು ಹೇಳಬೇಕೆಂದು ತಿಳಿಯದೆ ಮಾತನಾಡಲು ಪದದ-ಪಡಳೆ ಕೂಡಲೆ ಸುಮ್ಮನಾಗುವಳು)

**ಅಜ್ಜ**:— (ಆಕೆಯನ್ನು ದಿಟ್ಟಿಸುತ್ತ) ಇನ್ನು ದೇಶಸೇವಾದ ಕೆಲಸ ಮಾಡು—ಇನ್ನು ನೀನೇ ದೇಶಸೇವಾದ ಕೆಲಸ ಮಾಡಬೇಕಾಗೇದ ಅಂದೆ— (ಎಂದವನೆ ಮತ್ತೆ ಮುಖ ತಿರುಗಿಸಿ ಬೆನ್ನಿಗೆ ಕೈಕಟ್ಟಿಕೊಂಡು ಮುಂಬಾಗಿಲಿನತ್ತ ಹೊರಗೆ ದೃಷ್ಟಿಯನ್ನಿಟ್ಟು ನಿಲ್ಲುವನು. ಒಂದು ನಿಮಿಷದ ತರುವಾಯ ಹಾಗೇ ಮುಖ ತಿರುಗಿಸಿ ಉಸುರ್ಗರೆದು ಮೆಲ್ಲಗೆ ಹೆಜ್ಜೆಗಳನ್ನು ಇಡುತ್ತ ನಡೆಯುತ್ತ ಮಾತನಾಡತೊಡಗುವನು. ಮಾತು ಮುಗಿಯುವವರೆಗೆ ಹಾಗೇ ಅತ್ತಿತ್ತ—ಆಗಾಗ—ಗೋಡೆಗಿದ್ದ ನಾಯಕರ ಚಿತ್ರ ಕೆಲವುಗಳ ಪುಗಿಡಗಳ ಇದಿರು ತಡೆಯುತ್ತ—ಮುಖವನ್ನು ಕೆಳಗೆ ಹಾಕಿಕೊಂಡೇ ನಡೆಯುವನು. ಮಂದಾಕಿನಿಯು ಯಂತ್ರದ ಗೊಂಬೆಯಂತೆ—ಕೂತಲ್ಲಿಂದಲೆ ಮುಖವನ್ನು ಮಾತ್ರ ಅವನು ನಡೆದ ಕಡೆಗೆ ತಿರುಗಿಸುತ್ತಿರುವಳು.) ಸುಬ್ಬಣ್ಣ ಕೇಳಿದ ನಾನು ಯಾತ್ರೆಕ್ಕೆ ಯಾಕೆ ಹೋದೆ ಅಂತ.... ಬಿಂದೂನ ಸ್ವಭಾವ ಉಲಕೋಚ ಅಂದೆ....ಹುಂ... ನನ್ನದೂ ಸ್ವಭಾವ ಹಾಗೇ....ಸುಮ್ಮನೆ ಕೂಡಲಿಕ್ಕೆ ಆಗದೆ ಸುತ್ತಾಡಿ ಬಂದೆ.. ಈ ಊರು, ಈ ಓಣಿ, ಈ ಜನ, ಈ ಹರಟೆ—ಇದನ್ನೆಲ್ಲ ಬಿಟ್ಟು ಓಡಿ ಹೋದವರ್ಹಾಂಗ ಹೋದೆ....(ನಿಸಿರೆಳೆದು) ಎಲ್ಲಿ ಹೋದರೂ ನನ್ನ ಈ ಅತಿಪರಿಚಯದ ಅಸಹ್ಯ ಅನುಭವ ತಪ್ಪಲಿಲ್ಲ ...ಆಂ ?— ತಪ್ಪಲಿಲ್ಲ ಅಂದೆ....ಉತ್ತರ ಆಯ್ತು, ದಕ್ಷಿಣ ಆಯ್ತು, ಪೂರ್ವ ಆಯ್ತು, ಪಶ್ಚಿಮ ಆಯ್ತು—ಹೋದಲ್ಲೆಲ್ಲ ನನ್ನದೇ ಊರು....

ಅಂಥಾದ್ದೇ ಓಣಿ, ಅಷ್ಟೆ ಹೊಲಸು, ಬ್ರಾಹ್ಮಣರ ಓಣಿ, ಹಿಂದು ಓಣಿ, ಮುಸಲ್ಮಾನರ ಓಣಿ, ಹೊಲೆಯರ ಓಣಿ....ನೋಡಿನೋಡಿಥಾಂಗ ಅನ್ನಿಸಿತು ನನಗ—ಎಷ್ಟು ಪರಿಯಿಂದ ನಮ್ಮ ದೇಶ ಒಂದು ಅದ, ಅಖಂಡ ಆಗೇದ ಅಂತ....ಮುಂದೆ ಮಿಠಾಯಿ, ಮ್ಯಾಲೆ ತುಂಬಿ ನೊಣ !....ನೊಣ ಜಾಡಿಸೋದೆ ಮಿಠಾಯಿಯ ಸೇವಾ....ಮೂವತ್ತು ವರ್ಷ ಮುಂದಿಯ ಮ್ಯಾಲೆ ಅಧಿಕಾರ ನಡೆಸಿದ ನನ್ನ ಮ್ಯಾಲೆ ನನ್ನ ಹೃದಯ ಅಧಿಕಾರ ನಡೆಸಿದೆ ಈಗ....ಅದಕ್ಕ ಹೋದೆ ಯಾತ್ರಾಕ್ಕ ... ಅದರ ಫಲ ಅಂತ ಮುಪ್ಪು ಬಂದಿತು.... ( ಮತ್ತೆ ಪ್ರೇಕ್ಷಕರ ಕಡೆಗೆ ಬೆನ್ನು ತಿರುಗಿಸಿ ಮುಂಬಾಗಿಲಿನ ಕಡೆಗೆ ಮಾತಿಲ್ಲದೆ ನಡೆದು, ಮೊದಲಿನಂತೆ ಒಂದು ನಿಮಿಷ ಹೊರಗೆ ನೋಡಿ, ಮತ್ತೆ ಮೊದಲಿನಂತೆಯೆ ಒಳಗೆ ನಡೆದು ಬರುತ್ತ ಮಾತನಾಡುವನು) ಮುಪ್ಪು ಬಂದಿತು ನನಗ—ಅಂ ?.... ಕಡೆಯ ಆಶ್ರಮ....ಮೊದಲನೇದ್ದು ಸ್ವಭಾವ—ಆಗ ಎಲ್ಲ ಸರಳ, ಕುತೂಹಲ, ಪ್ರಾಮಾಣಿಕ....ಅದು ಹೋಯ್ತು ಅಂತ ಖಾತ್ರಿ ಆದ ಮ್ಯಾಲೆ ಎರಡನೇದ್ದು ಬುದ್ಧಿಯ ಆಶ್ರಮ—ಎಲ್ಲಾ ಸ್ವಾರ್ಥ, ಠಕ್ಕು, ದೊಡ್ಡಿಸ್ತನ....ಬುದ್ಧೀನೂ ಪೂರಾ ಕಳೀತು ಅಂತ ಅನ್ನಿಸಿದ ಮ್ಯಾಲೆ—ಇದು, ಮೂರನೇದ್ದು, ಕಡೆಯದು, ಮುಪ್ಪು....ಉತ್ಸಾಹ ತುಂಬ, ಶಕ್ತಿ ಸಾಲುವದಿಲ್ಲ; ಎದೆ ತುಂಬ ಜಾಣತನ, ಅದಕಾಗಿ ಹಾರಾಡುವ ಶಕ್ತಿ ಕಡಿಮೆ ಆಗೋದು ಎಡೆಗೆ; ಜಾಣತನ ಪೂರ್ತಿ, ಹೃದಯಕ್ರಿಯಾ ಸಮಾಪ್ತಿ...( ಕಿಚ್ಚಿನ ನಗೆಯಿಂದ )ನಾನು—ಬಿಂದೂ— ಮುಂದೂ ...ದೇಶಸೇವಾ ಮಾಡು ನೀನು, ಮುಂದೂ, ನನ್ನ ಮುಪ್ಪಿನ ದೇಹದೊಳಗ ನಿನ್ನ ಹೃದಯ ಇಟ್ಟು ದೇಶಸೇವಾ ಮಾಡು....ನನ್ನ ಜರಾ, ನಿನ್ನ ಜೀವನ; ಇವ್ರುಗಳ ಸಂಧಿ ಮಾಡು, ದೇಶಸೇವಾ ಮಾಡು.... ಮಾಡು.... ( ಸಾಕಷ್ಟು ದಣಿವಾದದ್ದು ಲಕ್ಷ್ಯಕ್ಕೆ ಬಂದು ಮಂದಾಕಿನಿಯ ಇದಿರಿಗಿದ್ದ ಕುರ್ಚಿಯನ್ನೆಳೆದುಕೊಂಡು ಕುಳಿತು ) ನನಗ ಮುಪ್ಪು ಬಂದಿದೆ ಅಂದೆ—ಅಂ ? (ಮೊದಲು ಸಲ ಈಗ ಮುಖವನ್ನೆತ್ತಿ ಆವಳನ್ನು ನೋಡುವನು)

**ಮಂದಾಕಿನಿ :—** ( ಒಂದು ನಿಮಿಷ ದಂಗುಬಡೆದು ಕುಳಿತು, ಆಮೇಲೆ ಹೃದಯ ದೊಳಗಿನ ಕುರುಕ್ಷೇತ್ರವನ್ನು ಗೆದಿಯುವ ಯತ್ನದ ನಗೆಯಿಂದ ಎದ್ದು,

ಅಜ್ಜನ ಕಡೆಗೆ ನಡೆದು, ಹಿಂದಿನಿಂದ ಅವನ ಎರಡೂ ಭುಜಗಳ ಮೇಲೆ ಕೈಯನ್ನಿಟ್ಟು, ತಲೆಗೆ ತಲೆ ಹಚ್ಚುವವಳಂತೆ ಬಾಗಿ ನಿಂತು) ಅಜ್ಜನ ಸೇವಾನೇ ದೇಶಸೇವಾ ಯಾಕಾಗಬಾರ್ದು ?

**ಅಜ್ಜ** — ( ಒಮ್ಮೆಲೆ ಅಜ್ಜನಂತಾಗಿ ) ದೇಶಕ್ಕ ಮುಪ್ಪು ಬಂದಿದೆ ಅಂತೀಯಾ? ಅಂ ? ( ಎಂದು ಹಿಂದಿನಿಂದ ಆವಳ ಕೈಯನ್ನು ಹಿಡಿದು ಮುಂದೆ ಕರೆತಂದು ತನ್ನ ಮಗ್ಗುಲಿನ ಕುರ್ಚಿಯಲ್ಲಿ ಕೂಡ್ರಿಸಿ) ಒಂದು ವರ್ಷದೊಳಗ ಅಜ್ಜನ ಸಲುವಾಗಿ ಹಳೆಯ ತರದ ಈ ಊರಿನೊಳಗ ಈ ಹೊಸತರದ ಮನೆಯನ್ನು ಕಟ್ಟಿಸಿದೆಯಲ್ಲ, ಮುಂದೂ, ಹಾಂಗೇ—ನೀನು ಎಲ್ಲಿ ಕೆಲಸ ಮಾಡಿದಿಯಂದ್ರೆ ಆಯ್ತು ಅಜ್ಜನ ಸೇವಾ—ಅಂ. (ನಗೆಯಿಂದ) ಇಂದೊ ನಾಳೆಯೊ ಅನ್ನೋ ಅಜ್ಜನ ಸೇವಾದೊಳಗ ತೊಡಗಿದ್ದ ಬೆಳಗಾಗುವದರೊಳಗ ಕೆಲಸ ಇಲ್ದೆ ಕೂಡಬೇಕಾದೀತು—ಅಂ ?

[ ಅಷ್ಟರಿಂದ ಅನಂತನು ಕೈಯಲ್ಲಿ ಕಪ್ಪು-ಸಾಸರನ್ನೂ ಪ್ಲೇಟನ್ನೂ ಹಿಡಿದು ಕೊಂಡು ಕೆಳಗಿಳಿಯುವನು. ಅವನ ಕಾಲಸಪ್ಪನ್ನು ಕೇಳಿ, ಎಚ್ಚೆತ್ತವಳಂತೆ ತಟ್ಟನೆ ಎದ್ದು ಚಕಿತಳಾಗಿ—]

**ಮಂದಾಕಿನಿ** :— ಏನೊ, ಅನಂತಾ ! ಇಷ್ಟೊತ್ತೂ ಮ್ಯಾಲೇ ಇದ್ದಿಯಾ ?

**ಅಜ್ಜ** .— ಚಹ ಕುಡಿದನೊ ಇಲ್ಲವೊ, ಬಿಂದೂ ?

**ಅನಂತ** :— ( ಮಂದಾಕಿನಿಯು ಮೇಜಿನ ಮೇಲೆ ಸಾವರಿಸುವುದನ್ನು ನೋಡಿ ) ನಾನು ಮಾಡ್ತೀನಿ ಅದನ್ನ—ತಾಯೀ— ( ಬಗುಜಗೆಯಿಂದ ಮುಂದ ಬಂದು ಟ್ರೇದಲ್ಲಿ ಎಲ್ಲ ಜತಗೊಡಗುತ್ತ--ಅಜ್ಜನಿಗೆ) ನಾನು ನಿಂತೆ-ನಿಂತೆ, ರಾಯರು ಚಹ ಕುಡೀಲೇ ಇಲ್ಲ—

**ಅಜ್ಜ** .— ತಕ್ಕೊಂಡು ಹೋಗಿ ನೀ ಕುಡಿಬೇಕಾಗಿತ್ತು—ಅಂ ?

**ಅನಂತ** .— ' ನೀನೇ ಕುಡಿ, ನನ್ನ ಕಣ್ಮುಂದೇ ಕುಡಿ ' ಅಂತ ಗಂಟು ಬಿದ್ದರು ನನಗ ರಾಯರು—ನಾನು ಕುಡೀತೀನಿ ಅಡಿಗೇ ಮನೆಗೆ ಒಯ್ದು ಕುಡೀತೀನಿ ಅಂದ್ರ ಕೇಳಲಿಲ್ಲ— ( ಹುಚ್ಚು ನಗೆಯು ಯತ್ನ ಮುಖದಲ್ಲಿ ಕಾಣುವುದು )

**ಮಂದಾಕಿನಿ** .— ( ಅನಂತನಿಗೆ ) ಮೊದಲು ಆ ಟ್ರೇ ಇಟ್ಟು ಬಂದು ಆ ಮೇಲೆ ಉಳಿದದ್ದನ್ನೆಲ್ಲ ತೆಗೆದಿಟ್ಟುಬಿಡು ( ಅವನು ಹೋಗುವನು. ಅವನ ಹಿಂದಿನಿಂದ ಒಳಬಾಗಿಲವರೆಗೆ ಹೋಗಿಬಂದು ನಗೆಯಿಂದ ) ಅಪ್ಪಗ

ಇದೊಂದು ಹೊಸ ಹುಚ್ಚು, ಆಳು ಮನುಷ್ಯರನ್ನು ಸರಿಜೋಡಿ ಮಾಡ್ಬೇಕೊಂತ—

**ಅಜ್ಜ** :— ನಿಮ್ಮ ಸುಬ್ಬಣ್ಣ ಹೊಲೇರ್ನ ಉದ್ಧಾರ ಮಾಡ್ಬೇಕಂದ್ಹಾಂಗ— (ನಗುತ್ತ) ಆಂ? ...ಆವರ್ನ್ಯಾ ಗೊತ್ತಿಲ್ಲದ ಹೊಲೇರಿಗಿಂತ ಮನೇವಳ್ಗಳ ಆಳು ಮನುಷ್ಯರ ಉದ್ಧಾರ ಅಷ್ಟೇನು ಹುಚ್ಚನ ಅಲ್ಲ—ನೀ ಯಾರ್ನ ಉದ್ಧಾರ ಮಾಡಬೇಕೊಂತ ಕಟ್ಟಿಗೊಂಡೀದಿ ?....ಆಂ ?

**ಮಂದಾಕಿನಿ** :— (ನಿರಾಶೆಯ ದನಿಯಲ್ಲಿ) ಯಾರನೂ ಇಲ್ಲ....

**ಅಜ್ಜ** :— ತನ್ನ ಉದ್ಧಾರ ಮಾಡ್ತೀಯೇನೋಂತ ಕೈಕಟ್ಟಿಕೊಂಡು ನಿಂತಾನಲ್ಲ ಸುಬ್ಬಣ್ಣ ?....ಆಂ ?....(ಕೆಣಕುವ ನಗೆಯಿಂದ) ಏನು— ಆಂ ? ಹಂದೂ, ಏನಂತೀ ? (ಎದ್ದು ಅವಳ ಕಡೆ ನಡೆದು ಬರುವನು)

**ಮಂದಾಕಿನಿ** :— (ಸಿಡುಕಿನ ದನಿಯಲ್ಲಿ) ಯಾ–ರ–ನೂ–ಇ–ಲ್ಲ—

**ಅಜ್ಜ** :— (ಅವಳ ಬೆನ್ನಮೇಲೆ ಕೈಯಾಡಿಸುತ್ತ) ಸಿಟ್ಟಿಗೇಳಬೇಡ, ಮಂದೂ....ಎಂದಿನಿಂದಲೂ ನಮ್ಮ ಮನೆತನ ಬುದ್ಧಿವಂತಾದದ್ದು.... ನಮ್ಮೆಲ್ಲರೊಳಗ ನೀನು ಹೆಚ್ಚು ಬುದ್ಧಿ ಇದ್ದಾಕೆ ಅನ್ನೋ ಖಾತ್ರಿ ಇದೆ ನನಗೆ....ಸ್ವಂತದ ಉದ್ಧಾರಕ್ಕ ನಿಂತು ಹತಾಶ ಮುದುಕ ಆದೆ ನಾನು ; ಮಂದಿಯ ಉದ್ಧಾರಕ್ಕ ನಿಂತು ಯಾರೂ ಬೇಡ ಅಂತ ಬಿಂದೂ ವಿಕ್ಷಿಪ್ತ ಆದ....ನೀನು ಆ ಮಾತೇ ಎತ್ಬೇಡ....ಮೊದಲು ನಾನೂ ನೀನೂ ಕೂಡಿ ಈ ಮನೆಯ ಉದ್ಧಾರ ಮಾಡೋಣ–ಆಂ ?

**ಮಂದಾಕಿನಿ** :— (ತಿಳಿಯದೆ) ನನ್ನ ವ್ಯವಸ್ಥಾ ಅಜ್ಜನ ಮನಸಿಗೆ ಬರಲಿಲ್ಲೇನೊ ? (ಅವನು ' ಇಲ್ಲ ' ಎಂದು ತಲೆ ಅಲ್ಲಾಡಿಸಲು ಹುಸಿ ಮುನಿಸಿನಿಂದ) ಏನು ಕೆಟ್ಟದೆ ? ನೋಡಿದವರೆಲ್ಲ ತಲೆ ತೂಗ್ತಾರ ಎಂಥಾ ಅಚ್ಚುಕಟ್ಟುತನ ಅಂತ !

**ಅಜ್ಜ** :— ಹೇಳಲಿಲ್ಲೇನು ನಮ್ಮದು ಬುದ್ಧಿವಂತ ಮನೆತನ ಅಂತ ? ಮಂದಿಗೆ ತಿಳಿಯಲಾರದ್ದು ನಮಗೆ ತಟ್ಟನೆ ತಿಳಿಯೋದು.

**ಮಂದಾಕಿನಿ** :— (ಹುಡುಗಬುದ್ಧಿಯ ಹಟದಿಂದ) ಏನು ಕೆಟ್ಟದೆ ನನ್ನ ವ್ಯವಸ್ಥಾದೊಳಗ ?

**ಅಜ್ಜ** :— (ವಿಚಾರ ಮಾಡುವ ಸೋಗಿನಿಂದ) ಏನು ಕೆಟ್ಟಿಲ್ಲ—ಹಾಂಗ ಕೇಳಪರೆ—ಇರಬೇಕಾದ್ದು ಎಲ್ಲಾ ಇದೆ— (ತುಸು ತಡೆಯುವನು. ಮಂದಾಕಿನಿಯು ಉಬ್ಬಿನಿಂದ ತನ್ನನ್ನು ನೋಡಲು) ಆದ್ರೆ ತಿರುವು-ಮುರುವು ಆಗೇದ—ಇಷ್ಟೆ! ಆಂ?—ಹಹ!

**ಮಂದಾಕಿನಿ** :— (ಸಿಟ್ಟಿನ ದನಿಯಿಂದ) ಏನು ತಿರುವು ಮುರುವು ಆಗೇದೊ! ನಾನು ಮಾಡಿದ್ದು ಅಂತ ಹುಡುಕಿ ಹುಡುಕಿ ಸುಳ್ಳೇ ಸುಳ್ಳೇ ತಪ್ಪು ತೆಗೆಯೋದು—ನನ್ನ ಕೆಣಕಲಿಕ್ಕೆ.......ಅಜ್ಜನ ಸ್ವಭಾವ ಗೊತ್ತು ಅಂತ, ಇಡಿಯ ಮನೆಯೊಳಗ ಅತೀ ಸುಂದರ ಮತ್ತು ಶಾಂತ ಅನ್ನಿಸೋ ಮೇಲಿಟ್ಟಿದ ಒಂದು ಕೋಣೆ ಅಜ್ಜನಿಗಾಗಿಯೆ ಕಾದಿಟ್ಟರಿ—

**ಅಜ್ಜ** :— (ನಡುವಯೇ) ಹಾಂ ಹಾಂ....ಅದೇ ತಪ್ಪು, ಅದೇ ತಿರುವು-ಮುರುವು ಅಂತ ಹೇಳಿದೆ ...(ಅವಳನ್ನು ಸಂತಯಿಸುವ ದನಿಯಲ್ಲಿ) ಅಲ್ಲ, ಹುಚ್ಚಿ, ದಿನದಿನಕ್ಕ ನಿನ್ನ ಅಜ್ಜನ ಕಾಲಿ ದಣಿಯೋದು ಅಂತ ತಿಳಿ. (ನಗುತ್ತ) ಆಂ?... ದಣಿಯೋ ಕಾಲಿನಿಂದ ಅಟ್ಟ ಹತ್ತೋ ಅಜ್ಜನ ಜಾರುಗುಂಡಿ ನೋಡಿ ನಗ್ಬೇಕಂತೀಯಾ? .. ಆಂ?.... ಅದೇನಿಲ್ಲ ...ದಿನದಿನಕ್ಕ ಕೆಳಗಿನ ಅಂತಸ್ತು ಅಜ್ಜನಿಗೆ—ಹತ್ತಲಿಕ್ಕೆ ಕಾಲಿಲ್ಲ, ನೋಡ್ಲಿಕ್ಕೆ ಕಣ್ಣಿಲ್ಲ....ಮ್ಯಾಲಮ್ಯಾಲಿನ ಅಂತಸ್ತು ಮೊಮ್ಮಗಳಿಗೆ—ಎಷ್ಟು ದೂರ ನೋಡೇನಂದ್ರೂ ಕಣ್ಣಿದೆ ಆಕೆಗೆ.... ಹೌದಲ್ಲೊ?...ಆಂ?....ಇದಿಷ್ಟು ಮನೆಯ ವ್ಯವಸ್ಥಾ ಉದ್ಧಾರ ಮಾಡೋಣ....ಎಲ್ಲಿ ಇದ್ದಾನ ಕರೆ ನಿನ್ನ ಆಳಿನ್ನ...ಅವನ ಹೆಸರೇ ಬರೋದಿಲ್ಲ ನನ್ನ ಬಾಯಿಗೆ—(ಇಷ್ಟರಲ್ಲಿ ಅನಂತ ಬಂದು ಮೇಜಿನ ಮೇಲೆ ಉಳಿದ ಗಾಜಿನ ಪಾತ್ರೆಗಳನ್ನು ಒಯ್ಯುವಾಗ) ಅನಂತಾ— ಆ ಆಳಿನ್ನ ಕರೆಯೊ!—ಮ್ಯಾಲಿ ಕೆಲಸ ಇದೆ ಅಂತ ಹೇಳು.... (ಮಂದಾಕಿನಿಗೆ) ಮುದುಕನಿಗೆ ಕೈಹಿಡಿದು ಹಾದೀ ತೋರಿಸ್ತೀಯಾ, ಮಗೂ! (ಎಂದು ಕೆಣಕುವಂತೆ ಕಣ್ಮುಚ್ಚಿ ಕೈಚಾಚಿ ಅವಳ ಹೆಗಲ ಮೇಲಿಡುವನು)

**ಮಂದಾಕಿನಿ** :— (ನೊಂದ ಸೋಗಿನ ದನಿಯಲ್ಲಿ) ಇಪ್ಪತ್ತು ವರುಷ ಇದೇ ಮನೇವಳಗ ಕಣ್ಮುಟ್ಟಿ ನೋಡತಾ ಬೆಳೆದರೂ ನನ್ನ ಮನಸ್ಸಿಗೆ

ಹತ್ತ್ಯೇದ ನಿಮ್ಮ ಜೇಷ್ಟಾಬುದ್ಧಿ—ಪಾಪ! ಶ್ರೀಮಂತ ಸುಬ್ಬಣ್ಣ ಅವರಿಗೆ ಏನು ಅನ್ನಿಸಿರಬೇಕೊ!

**ಅಜ್ಜ** :—(ಒಮ್ಮೆಲೆ ವಿನೋದವನ್ನು ಬಿಟ್ಟು ಗಂಭೀರನಾಗಿ) ಆದರೂ ಸುಬ್ಬಣ್ಣ ಬಹಾಳ ಹುಷಾರ ಹುಡುಗ ಕಾಣ್ತಾನ—ಆಂ? ...ಅಲ್ಲ—ಮಂದೂ, ಒಂದು ಮಾತು ಕೇಳ್ತೇನಿ—ದೇಶಭಕ್ತರು—ಏನು ಸುಬ್ಬಣ್ಣ ಬರಿಯ ಕಾಂಗ್ರೆಸವನೊ?—ಏನೇ ಇರಲಿ, ಕಾಂಗ್ರೆಸದೊಳಗ ಇದೆ ಏನು ಪದ್ಧತಿ?

**ಮಂದಾಕಿನಿ** :— ಪದ್ಧತಿ? ಯಾವ ಪದ್ಧತಿ?

**ಅಜ್ಜ** :— ವರದಕ್ಷಿಣೆ ಕೇಳೋ ಪದ್ಧತಿ—ಹಹ....ಹಹಹಹ!—ಆಂ?
(ಮಂದಾಕಿನಿಯು ಬಹಳ ಸಿಟ್ಟಿಗೆ ಬಂದಂತೆ ತೋರುವಳು)

[ಇಷ್ಟರಲ್ಲಿ ಒಳಬಾಗಿಲಿನಿಂದ ಅನಂತ, ಅವನ ಹಿಂದಿನಿಂದ ಚಿನ್ನ ಬರುವರು.]

**ಅನಂತ** :— ಚಿನ್ನನ ಕರಕೊಂಡು ಬಂದೀನಿ—

**ಅಜ್ಜ** :—(ಒಮ್ಮೆಲೆ ತಿರುಗಿ ನಿಂತು ಚಿನ್ನನನ್ನು ದಿಟ್ಟಿಸುತ್ತ) ಚಿನ್ನ! . ಆಂ? ...ನಿನ್ನ ಹೆಸರು ಚಿನ್ನ?....ನಿನಗ ಎಲ್ಲಿಯೆ ನೋಡಿಧಾಂಗ ಅನ್ನಿಸಿ ನಿನ್ನ ಹೆಸರು ಮತ್ತೇನೊ ಇರ್ಬೇಕು ಅಂತ ಮಾಡಿದ್ದೆ.... ಅಲ್ಲೋ—ನಾ ಬಂದಾಗಿನಿಂದ ನೋಡ್ತೇನಿ, ಕೋಟು-ರುಮಾಲು ಬಿಟ್ಟೇ ಇಲ್ಲಲ್ಲ!....ಆಂ?....ಅವನ್ನ ಕಟ್ಟಿಗೊಂಡೇ ಹುಟ್ಟೇದಿಯೊ ಏನು ಮತ್ತೆ?....ಆಂ?....ಹಹ! (ಎನ್ನುತ್ತ ಪಾವಟಿಗೆ ಏರುವನು)

**ಮಂದಾಕಿನಿ** :— (ಅಧಿಕಾರದ ದನಿಯಿಂದ) ಚಿನ್ನ—ಅಟ್ಟದ ಮೇಲೆ ನಡೀಯೊ....ಎರಡು ಕೋಣೆಯೊಳಗಿನ ಸಾಮಾನು ಅದಲ-ಬದಲ ಮಾಡ್ಬೇಕಾಗೇದ....

**ಅಜ್ಜ** :—(ಇಷ್ಟರಲ್ಲಿ ಮೇಲೆ ಹೋಗಿದ್ದಾನೆ. ಅಲ್ಲಿಂದಲೆ) ಆ ಅನಂತಗೂ ಬಾ ಅಂತ ಹೇಳು, ಮಂದೂ....ಎತ್ತಾಡಲಿಕ್ಕೆ ಕೈ ಹಚ್ಚಲಿ.

**ಮಂದಾಕಿನಿ** :— ಅನಂತಾ—

**ಅನಂತ** :— ನಾನೂ ಬರ್ತೇನಿ ತಾಯಿ—ಬಂದೆ—

**ಮಂದಾಕಿನಿ** :— (ಬಂದು ಪಾವಟಿಗೆ ಹತ್ತಿದ್ದು ತಿರುಗಿ ನಿಂತು) ಎಲ್ಲಾರೂ ಮ್ಯಾಲೆ ಬಂದರೆ, ಬರೋವಾಗ ಮುಂದಿನ ಬಾಗಿಲ ಮುಂದ

ಮಾಡಿಕೊಂಡು ಬರ್ರಿ—( ಎನ್ನುತ್ತ ಮರೆ ಹೋಗುವಳು )

( ಚೆನ್ನ-ಅನಂತ ಒಬ್ಬರನ್ನೊಬ್ಬರು ನೋಡುವರು )

**ಚೆನ್ನ** :— ( ಅತ್ಯಂತ ಉದ್ವಿಗ್ನತೆಯಿಂದ ) ಇದು ಒಳ್ಳೇ ಪಂಚೇತಿಗೆ ಬಂತಲ್ಲ ಪರಸಂಗ !

**ಅನಂತ** :— ( ಆಶ್ಚರ್ಯದಿಂದ ) ಕೆಲಸ ಹೇಳಿದ ಕೂಡಲೇನೇ ಪ್ರಸಂಗ ಬಂದೇಬಿಟ್ಟಿತೇನೋ !

**ಚೆನ್ನ** :— ( ಅಪಮಾನಿತನಾಗಿ ) 'ಕೆಲಸಾ ಹೇಳಿದ ಕೂಡಲೇನೇ' ? ಕೆಲಸಾ ತಪ್ಪಿಸೋ ಜಾತಿ ನಾ ಅಂತ ತಿಳಿದಿಯೇನು ಅನಂತಪ್ಪಾ ?

**ಅನಂತ** :— ಆದರೆ ಯಾಕ 'ಪಂಚೇತಿ' ?

**ಚೆನ್ನ** :— ( ತಲೆ ತುರಿಸುತ್ತ ) ಅಂದ್ರ ಅದು ಹ್ಯಾಂಗ ಐತಿ ...ಇಲ್ಲಾ—ನಿನಗೇ ಎಲ್ಲಾ ಹೇಳ್ತೇನಿ, ಅನಂತಪ್ಪಾ ; ನೀ ನಿಕಾಲಿ ಕೊಟ್ಟಾಗ—

**ಅನಂತ** :— ( ನಡುವೆಯೇ) ಮೊದಲು ಮ್ಯಾಲೆ ಹೋಗೋಣ. ಆ ಮ್ಯಾಲೆ ಮುಂದೀ ಮಾತು.

**ಚೆನ್ನ** :— ( ಹೊರಟ ಅನಂತನನ್ನು ತಡೆಯುತ್ತ ) ಎಲೆಲೆ— ತಡ್ ತಡ್ ತಡೀ, ಅನಂತಪ್ಪಾ ! ಮ್ಯಾಗ ಹೋಗೋ ಮುಕ್ಕಟ್ಟೇ ನಿಕಾಲ್ ಬೇಕಾಗೇತಿ—

**ಅನಂತ** :— ( ಅವಸರ ಮಾಡುತ್ತ ) ಹೇಳ್ತಿದ್ರೆ ತಟ್ಟನೆ ಹೇಳು—

**ಚೆನ್ನ** :— ಎಲೆ ! ತಟ್ನ ಹೇಳಂದ್ರ ?....ಹ್ಯಾಂಗ ನೀ ಕೇಳಿದ್ರ ಹೇಳಲ್ಯೊ— ಇಲ್ಲಾ—

**ಅನಂತ** :— ( ಪಟವಿಂದ ) ಹೇಳೊ, ಮಹಾರಾಯಾ, ಈಗ ಕೇಳಿದೆನಲ್ಲ—

**ಚೆನ್ನ** :— ಹಾ—ನಾನೂ ಅದ್ನೆ ಅಂದ್ನಿ....ಈಗ ಕೇಳಿದಿ, ಈಗ ಹೇಳ್ತೇನಿ ಅಂತ....ನೀ ಕೇಳ್ತೀಯೊ ಇಲ್ಲೊ ಅಂತ ಭರವಸೆ ಇಲ್ದೆ ತಟ್ನೆ ಹ್ಯಾಂಗ ಹೇಳೋದು ಅಂದೆ—

**ಅನಂತ** :— ಸಾಕು, ನಿನ್ನ ಜೋಡಿ ಮಾತು. ತೆಗೆದಿಡು ಕೋಟು, ನಡೆ ಮೊದಲು.

**ಚೆನ್ನ** :— ( ಚಕಿತನಾದವನಂತೆ ) ಕೋಟು ತೆಗೆದಿಡು ಅಂದೆಯಾ, ಅನಂತಪ್ಪಾ ? ಅದೇ ಪಂಚೇತಿಗೆ ಬಿದ್ದೇತಿ ಅಂದೆ ನೋಡು—ಅಲ್ಲಲ್ಲ,

ಅನಂತಪ್ಪಾ, ತುಸಾ ತಡಿ...ಅವ್ವಾ ಅವರು ಹೇಳಿದ್ದರು, ದೊಡ್ಡ ಅಜ್ಜನೋರ ಸಮುಕ್ಷಮು ಕೋಟು-ರುಂಬಾಲು ತೆಲೀಮ್ಯಾಗ ಇರಾಕೇ ಬೇಕು ಅಂತ—. ಈಗ ಹೇಳ್ತಾರ ಸಾಮಾನ ಅದಲಾ-ಬದಲಿ ಅಂತ....ಕೋಟ ಹಾಕ್ಕೊಂಡ್ರ ಕೆಲಸಕ್ಕ ವೈನ ಅಲ್ಲ—ಕೋಟ ತೆಗೆದಿನೆ—ದೊಡ್ಡ ಅಜ್ಜನೋರು ಅಲ್ಲಿ ಬಂದರ ಹ್ಯಾಂಗ ಅಂತ.... ( ಹತ್ತಿರ ಬಂದು ) ಇಡಕ್ಕಂತೀನಿ ಪರಸಂಗ ಬಾತು ವೈಪ್ಯಾಗ ಅಂತ—

**ಅನಂತ :—** ( ತಿರಸ್ಕಾರದಿಂದ ನಕ್ಕು ) ಅಲ್ಲಿ ಸಾಮಾನಿನ ಪ್ರಸಂಗ ಬರೋ-ದಿದೆ ವೈಮ್ಯಾಲಿ....ಕೋಟ ತೆಗೆದು ಅದಕ್ಕೆ ಜಾಗಾ ಮಾಡಿಕೊಡು.... ಹುಂ .. ( ಒಳಗಿಂದೊಳಗೆ ನಗುತ್ತ ಪಾವಟಿಗೆ ಹತ್ತಿ ಹೋಗುವನು )

**ಚೆನ್ನ :—** ( ಅವನು ಹೋದುದನ್ನೆ ನೋಡುತ್ತ ) ಯಾರು ಯಾರಿಗೆ ಉಪೇ (-ಪಯೋ)ಗ ಇಲ್ಲ ಜಗದಾಗ ಅಂಬೋದು ಸುಳ್ಳಲ್ಲ.... ಹೋಕ್ಕೊಲನ್ಯಾಕ !....ಇವ ಏನು ಭಾರೀ ಶಾಣ್ಯಾ ಅಂತ ಇವಗ ಕೇಳಿದ್ದಿನೆ ?....ಭಾಳ ವರಸ ದುಡಿದವ ಈ ಮನ್ಯಾಗ, ನನ್ನಂಥಾ ಹೊಸಬಗ ಗೊತ್ತಿಲ್ಲ ಅಂತ ಕೇಳಿದ್ದು....( ತಲೆ ಅಲ್ಲಾಡಿಸುತ್ತ )ಯಾರು ಯಾರಿಗೂ ಉಪೇಗ ಇಲ್ಲ....( ರಂಗಸ್ಥಲದ ಮಧ್ಯಕ್ಕೆ ನಡೆದು ಬರುತ್ತ ) ತಾನೂ ಅಡಿಗೀ ನೋಕರ, ನಾನೂ ತನ್ಹಾಂಗೇ ನೋಕರ.... ಆದ್ರೂ—ನಗ್ತಾನ ಹ್ಯಾಂಗ ನೋಡು ನನ್ನ ಮುಂದ ತಾ ದೊಡ್ಡ ಮನಸ್ಯಾ ಅಂಬೋ ಹಾಂಗ....ಹಾರೋರ ಮ್ಯಾಗ ಭಾರ ಹಾಕಿದರ ಕಾರಾ ತಿಂದು ಬಿಸಿನೀರ ಕುಡಿದಾಂಗ ಅನ್ನೋದು ಬರಾಬರಿ ಅನಿಸ್ತೈತಿ ಇಂಥವ್ನ ನೋಡಿದ್ರ— ( ಒಮ್ಮೆಲೆ ಎಚ್ಚತ್ತವನಂತೆ ಅತ್ತಿತ್ತ ನೋಡಿ) ಇಲ್ಲಿ ಯಾಕ ಬಂದ್ನಿ ನಾ ಮುದುಕರ್ಹಾಂಗ ನನ್ನೊಟ್ಟಿಗೇ ಮಾತಾಡತಾ ?.... ( ತಲೆ ತುರಿಸಿ ) ಹಾಂ—ಕೋಟು ತೆಗೆಯೋದು ಹ್ಯಾಂಗ ಅಂತ ಯಿಚಾರ....ಆಗ್ಲಿ—ಮೊದಲ ಬಾಕಿಲಾ ಒಂದು ಮುಂದ್ಮಾಡೋಣ.... ( ನಡೆದು ಪರದೆಯನ್ನು ಸುತ್ತಿ ಬಾಗಿಲವನ್ನು ಮುಚ್ಚುವನು. ಮುಂಬಾಗಿಲ ಮುಚ್ಚಿದೊಡನೆ ಒಳಗೆ ಕತ್ತಲಾಗಿದೆ ಎಂದು ತೋರಿಸಲು ರಂಗಸ್ಥಲದ ಎಲ್ಲ ಬೆಳಕನ್ನು ಆರಿಸಬೇಕು. ಈಗ ರಂಗಸ್ಥಲದ

ದೃಶ್ಯವೆಲ್ಲ ತೀರ ಅಸ್ಪಷ್ಟವಾಗಿ ಕಾಣುವುದು ಮುಂಬಾಗಿಲ ಹತ್ತಿರದಲ್ಲಿದ್ದ ಚೆನ್ನನು—ಪ್ರೇಕ್ಷಕರಿಗೆ--ಕಾಣಿಸುವುದಿಲ್ಲ. ಅವನ ದನಿ ಮಾತ್ರ ಕೇಳುವುದು) ಹಾಂಹಾಂ—ಕತ್ತಲೀವಳಗ ಹೋಳೀತು ನೋಡು ನನಗ ಬುದ್ಧಿ! ಈಗ ಕೋಟ ತೆಗೆದೆ ಬಿಟ್ಟೀನಿ ...ತೆಗೆಯೋದು ನನಗೇ ಕಾಣಾಕಿಲ್ಲ... 'ಕೋಟ ಯಾಕೆ ತೆಗೆದಿ, ಚೆನ್ನ' ಅಂದ್ರ—'ತೆಗೆದೀನೆಲ್ರಿ' ಅಂದ್ಬಿಡ್ತೀನಿ... (ಕೋಟು ತೆಗೆದು, ಮಡಿಕೆ ಹಾಕಿ, ಕೈಗಳ ನಡುವಿಟ್ಟು ಚಪ್ಪರಿಸಿದ ಸಪ್ಪು ಕೇಳಬರುವುದು) ಯಾರು ಯಾರಿಗೂ ಉಪೇಗ ಇಲ್ದಿದ್ರೂ ತನ್ನ ಬುದ್ದಿ ತನಗ ಬಿಟ್ಟಿಲ್ಲ—(ಅಟ್ಟದ ಮೇಲಿಂದ ಮಂದಾಕಿನಿಯು ದನಿ-'ಚೆನ್ನ'—, ಅದನ್ನು ಕೇಳಿ) ಬಂದ್ನಿ—ಅವ್ವಾ- (ಎಂದು ಅವಸರ ಮಾಡುವಾಗ ಸರಿಯಾಗಿ ಕಾಣದೆ ಮೊದಲ ಪಾವಟಿಗೆಯನ್ನು ಎಡಹುವನು, ಆ ಸಪ್ಪೂ ಕೇಳಬರುವಾಗ) ಬೆಳಕಿನಾಗ ಎಡವಿದ್ದರ ಕಣ್ಣಿಗೆ ಕತ್ತಲೆ ಬರೋ ಆಟ—(ಸಿಟ್ಟಿನಿಂದ ಪಾವಟಿಗೆಗಳ ಮೇಲೆ ಕಾಲನ್ನಪ್ಪಳಿಸುವ ಸದ್ದಿಗೆ--)

(ತೆರೆ ಬೀಳುವುದು)

## ಮೊದಲ ಅಂಕ ಮುಗಿದುದು.

# ಅಂಕ ೨

[ ಮೊದಲ ಅಂಕದಲ್ಲಿ ನಡೆದ ಸಂಗತಿಯು ಎಂಟು ದಿವಸಗಳ ತರುವಾಯ. ಬೆಳಗಿನ ಎಂಟೂವರೆ ಸುಮಾರಿನ ಸಮಯ. ಮೊದಲ ಅಂಕದ ಕೋಣೆಯ ರೀತಿಯೆ ಇದ್ದ ಮೇಲಟ್ಟದ ಕೋಣೆ. ಬಾಗಿಲು, ಗೋಡೆ, ಕಿಟಕಿ ಮೊದಲಾದವು-ಗಳೆಲ್ಲ ಹಿಂದಿನ ಅಂಕದಲ್ಲಿ ಕಾಣಿಸಿದಂತೆಯೆ ಇವೆ. ಆದರೆ ಮೇಲಟ್ಟವೆಂದು ತೋರಿಸಲು ಕೆಲವು ಅದಲು-ಬದಲುಗಳಿವೆ. ಗೋಡೆಗುಂಟ ಹೂವಿನ ಗಿಡಬಳ್ಳಿ-ಗಳಿಲ್ಲ; ಇದಿರಿನ ಬಾಗಿಲ ಮೇಲೆ ಗಡಿಯಾರವಿಲ್ಲ, ಆದರೆ ಬಾಗಿಲಿನಿಂದ ಹೊರಗೆ ನೋಡಿದಾಗ ಒಂದು ಉಪ್ಪರಿಗೆ ಮತ್ತು ಗಿಡಗಳ ತುದಿ, ದೂರದಲ್ಲಿ ಮನೆಯ ಮಾಳಿಗೆ ಕಾಣಸುವುವು; ಅದರಂತೆಯೆ (ಪ್ರೇಕ್ಷಕರ) ಎಡಬದಿಯ ಬಾಗಿಲಿಗೆ ಕೋಣೆಯ ಒಳಗೆ ಮೇಲೇರುವ ಪಾವಟಿಗೆಗಳಿಲ್ಲದೆ, ಬಾಗಿಲ ಹೊರಗೆ ಕೆಳಗಿಳಿಯುವ ಪಾವಟಿಗೆ-ಗಳು (ಹೊಸ್ತಿಲವನ್ನು ತುಸು ಎತ್ತರ ಮಾಡಿ ಕಾಣಸಬೇಕು) ಇದಿರಿನ ಬಾಗಿಲಿನ ಎರಡೂ ಬದಿಗೆ ಗೋಡೆಗಳ ಇವೆ. (ಪ್ರೇಕ್ಷಕರ) ಬಲಬದಿಯ ಬಾಗಿಲಿಗೆ ಮೊದಲಿನ ಅಂಕದಲ್ಲಿಯಂತೆ ಪರದೆ ಇದೆ.

ರಂಗಸ್ಥಲದಲ್ಲಿ ನಟ್ಟನಡುವೆ ಒಂದು ದೊಡ್ಡ ಚೌಕ ಮೇಜು ಇದೆ. ಅದರ ಮೇಲೆ ಪುಸ್ತಕಗಳೂ, ಪತ್ರಿಕೆಗಳೂ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ; ಒಂದೆಡೆ ಬರೆಯುವ ಸಲಕರಣೆಗಳಿವೆ, ಮೇಜಿನ ಹಿಂಬದಿಗೆ ಮೂರು ಆರಾಮ ಕುರ್ಚಿ-ಗಳಂತಹ ಚಿತ್ರದ ಹರವಾದ ಕುರ್ಚಿಗಳಿವೆ.

ಪಾವಟಿಗೆಯ ಬಾಗಿಲು,--ಹಿಂಬಾಗಿಲುಗಳ ನಡುವಿನ ಭಾಗದಲ್ಲಿ ಒಂದು ಗಾಜಿನ ಬಾಗಿಲ ಕಪಾಟು ಇದೆ. ಅದರಲ್ಲಿ ಪುಸ್ತಕಗಳೂ ಪತ್ರಿಕೆಗಳೂ ಅಸ್ತವ್ಯಸ್ತ-ವಾಗಿವೆ. ಕೆಳಗಿನಿಂದ ಬಂದರೆ ಪಾವಟಿಗೆಗಳ ಬಲಬದಿಗೆ ಒಂದು ಕನ್ನಡಿಯ Stand ಇದೆ. ಕಪಾಟಿನ ಮೇಲೆ ಒಂದು Time-piece.

ತೆರೆ ಮೇಲಕ್ಕೆದ್ದಾಗ ಅಜ್ಜನು ಒಂದು ಆರಾಮಕುರ್ಚಿಯಲ್ಲಿ ಬಿದ್ದುಕೊಂಡಿ-ದ್ದಾನೆ. ಮೈಮೇಲೆ ಕರಿ ಉದ್ದ ಕೋಟು, ತಲೆಗೆ ಟೊಪ್ಪಿಗೆ (ದುಂಡ), ಹೆಗಲಿಗೆ ಒಂದು ಅಂಚಿನ ಉಪ್ಪರಣ--ಮಡಿಕೆ ಹಾಕಿದ್ದು--ಬಲಬದಿಗೆ ಸುತ್ತಿ ಎಡ

ಭುಜದಿಂದ ಹಿಂದೂ-ಮುಂದೂ ಬಿದ್ದಿದೆ; ಕೈಬಡಿಗೆ ಮೇಜಿನಮೇಲಿವೆ; ಪಾವಟಿಗೆ-ಗಳ ಹತ್ತಿರ Slippersಗಳಿವೆ; ಮೇಲೆ ನೋಡುತ್ತ, ಎರಡೂ ಮೊಳಕೈಗಳನ್ನು ಕುರ್ಚಿಯ ಕೈಗಳ ಮೇಲೂರಿ ವಿಚಾರದಲ್ಲಿದ್ದಾನೆ. ಒಂದೆರಡು ನಿಮಿಷಗಳಲ್ಲಿ ಅಜ್ಜನು ಪಾವಟಿಗೆಗಳಿಂದ ಸದ್ದು ಬರುವುದನ್ನು ಕೇಳುವಂತೆ ಕುಳಿತಲ್ಲಿಂದಲೆ ಬಲ ಬದಿಗೆ ಮುಖ ತಿರುಗಿಸಿ ನೋಡುತ್ತಾನೆ. ಅದೇ ಸಮಯಕ್ಕೆ ಅನಂತನು ಒಂದು ಟ್ರೇದಲ್ಲಿ ಚಹದ ಕೆಟಲ್, ಒಂದು ಕಪ್ಪು-ಸಾಸರು, ಸಕ್ಕರೆಯ ಪಾತ್ರೆ ಮೊದ-ಲಾದ್ದನ್ನು ತೆಗೆದುಕೊಂಡು ಬರುವನು. ಬಂದವನೆ ಲಗುಬಗೆಯಿಂದ ಮೇಜಿನ ಮೇಲೆ ತುಸು ಸಾವರಿಸಿ ಟ್ರೇ ಇಡುವನು. ಮುಂದೆ ಕೆಲ ಮಾತುಗಳು ನಡೆದಾಗ ಅನಂತನು ಮೇಜಿನ ಮೇಲಿನ ಪುಸ್ತಕಗಳನ್ನೂ, ಕಾಗದಗಳನ್ನೂ ಸಾವರಿಸುತ್ತಾನೆ; ಆಗಾಗ ಕೆಲ ಪುಸ್ತಕಗಳನ್ನು ಕಪಾಟದೊಳಗೆ, ಕಾಗದಗಳನ್ನು ಕಪಾಟದ ಮೇಲೆ ಇಡುವನು. (ಆದರೆ ಒಂದು ಪತ್ರಿಕೆಯನ್ನೂ ಒಂದು ಪುಸ್ತಕವನ್ನೂ ಮಾತ್ರ ಮೇಜಿನ ಮೇಲೆಯೆ ಬಿಡತಕ್ಕದ್ದು.)]

**ಅಜ್ಜ** :— (ಎಚ್ಚೆತ್ತವನಂತೆ) ಚಹಾದ ಹೊತ್ತಾಯ್ತೇನೋ— ಆಂ— ಅನಂತಾ ?

**ಅನಂತ** :— (ತನ್ನಿಂದ ತಡವಾಯ್ತೆಂಬ ಭಾವನೆಯಿಂದ) ಇಲ್ಲಾ—ಅಂದ್ರೆ-ಒಂತುಸಾ— ತಡ ಆಯ್ತು.... ನಾನು ಕೆಳಗಿನ ಕೋಣೆಯೊಳಗ ಮುಂಚೆ ಹೋದೆ—ಅದಕ್ಕ—

**ಅಜ್ಜ** :— (ನಕ್ಕು) ಕೆಳಗಿನ ಕೋಣೆಯೊಳಗ !....ಆಂ ?....ಎಂಟು ದಿವಸ ಆದ್ರೂ ಇನ್ನೂ ರೂಢೀನೇ ಆಗಿಲ್ಲ ನೋಡು, ಅನಂತಾ....

**ಅನಂತ** :— ಇಲ್ಲೇ ಇದ್ದೀರಿ ಅಂತ ಇಲ್ಲೇ ತಂದೆ—

**ಅಜ್ಜ** :— (ಕುರ್ಚಿಯಲ್ಲಿ ಎದ್ದು ಕುಳಿತು) ಇಲ್ಲೇನ ತಲ್ಲೇನು ? ಇನ್ನೂ ಇದ್ದೇನಿ ಅಂಬೋದು ಮುಖ್ಯ....ಯಾಕೊ ? ಆಂ ?....(ಟ್ರೇ ನೋಡಿ) ಒಂದೇ ಕಪ್ಪು ತಂದೆಯಲ್ಲ ?

**ಅನಂತ** :— (ಚಹವನ್ನು ಹಾಕಲು ಸಿದ್ಧನಾಗುತ್ತ) ಇನ್ನೂ ಮಂದಾಕಿನೀ ತಾಯಿಯವರು ಹೊರಗಿನಿಂದ ಬಂದಿಲ್ಲ.

**ಅಜ್ಜ** :— ಸುಬ್ಬಣ್ಣನೂ ಇದ್ದಾನೇನು ಜೋಡಿ ? (ಉತ್ತರಕ್ಕಾಗಿ ತಡೆಯುವನು. ಉತ್ತರವಿಲ್ಲ) ಊಟ-ಸ್ನಾನಕ್ಕಾದರೂ ಮನೀಗೆ ಹೋಗ್ತಿರ್ತಾನೇನೊ ವಕೀಲ ?....ಆಂ ?....

**ಅನಂತ** :— ಅವರೂ ಇವರೂ ಕೂಡಿ ಯಾವಾಗಲೂ ಸಭಾ, ಆ ಕೆಲ್ಸ ಈ ಕೆಲ್ಸ ಅಂತ ತೊಡಗಿರ್ತಾರ....

**ಅಜ್ಜ** :— ( ಅನಂತನು ಕೊಟ್ಟ ಕಪ್ಪನ್ನು ತೆಗೆದುಕೊಳ್ಳುತ್ತ ) ತೊಡಗಲಿ— ತೊಡಗಲಿ ಬಿಡು.... ಬಿಂದೂ ಎಲ್ಲಿದ್ದಾನೆ ?

**ಅನಂತ** :— ಏನೊ ಬರೀತಾರೊ ಓದತಾರೊ ? ಕೋಣೆಯ ಹೊರಗ ಕಾಣಿಸಿಲ್ಲ ಮುಂಜಾನಿನಿಂದ.

**ಅಜ್ಜ** :— ( ಚಹವನ್ನು ಕುಡಿಯುತ್ತ ) ಅಂತೂ ಕೆಲಸ ಇಲ್ದೆ ಮುಂದಿಗೆ ತ್ರಾಸ ಕೊಡೋವವ ನಾನೊಬ್ಬನೆ ಅನ್ನು....ಆಂ ?....( ಉತ್ತರವಿಲ್ಲ ) ಮುದುಕ ಆದ ಮ್ಯಾಲೆ ಮನೆ ಕಟ್ಟಿಸೋದಾದರೆ ಗಚ್ಚಿನ ಗೋಡೆ ಹಾಕಿಸ್ಬೇಕು ನೋಡು, ಅನಂತಾ, ಆಂ ?....ಅಂದ್ರೆ ತನ್ನ ಮಾತು ತನಗೇ ಕೇಳಿಸಿ ಯಾರಿಗ್ಬೇನೂ ಹೊತ್ತು ಹೋಗೋದು ! ಆಂ ? ಹಹ !

**ಅನಂತ** :— ( ಸಮಯ ಸಾಧಿಸಿತೆಂಬಂತೆ ) ಮನೆ ಕಟ್ಟಿಸೋವಾಗ ಮಾತ್ರ ತಾಯಿಯವರು ಒಂದು ನಿಮಿಷ ಕದಲತಿದ್ದಿಲ್ಲ....( ಅಜ್ಜನು ಮುಖವೆತ್ತಿ ತನ್ನನ್ನು ನೋಡಲು ) ಬಿಟ್ಟೊಬೇಸರಿಲ್ಲದೆ ಪ್ರತಿಯೊಂದು ಕೆಲಸ ನಿಂತು, ನೋಡಿ ಮಾಡಿಸತಿದ್ದರು.

**ಅಜ್ಜ** :— ಯಾರು ? ಮುದೂಸ ? ಬಿಂದೂ ಏನ್ಮಾಡ್ತಿದ್ದ ನುತ್ತೆ ?

**ಅನಂತ** :— ( ಮುಗುಳ್ನಗೆಯಿಂದ ) ಅವರು ಯಾರ ಕೇಂಸ್ದೊಳಗ್ಗೆ ಇದ್ದ ಬರ್ತಿದ್ದಿಲ್ಲ.

**ಅಜ್ಜ** :— ( ಕಪ್ಪನ್ನು ಕೆಳಗಿಟ್ಟು ಅರ್ಧ ತನ್ನಷ್ಟಕ್ಕೆ ) ತಾನೇ ನೋಡಿ ನಿಂತು ಕಟ್ಟಿಸಿದಳು ಅಂತೀಯಾ ? ಗಂಡಸಾಗಿದ್ದರೆ ಮನೀ ನಡೆಸಿಯೂ ಬಿಡ್ತಿದ್ದಳು... ( ಅನಂತನನ್ನು ನೋಡಿ ) ಅನಂತಾ, ಬಿಂದೂ ಎಲ್ಲಿ ಇದ್ದಾನೆ ನೋಡೊ....ಅವನಿಗೂ ಚಹ ಇಲ್ಲೇ ತಂದ್ಬಿಡು.... ( ಅನಂತನು ಹೊರಡುವನು ) ಆ ಸುಬ್ಬಣ್ಣ ವಕೀಲನೂ ಬಂದ್ರೆ ಎಲ್ಲಾರಿಗೂ ಇಲ್ಲೇ ಚಹಾ ತಂದ್ಕೊಡು. ( ಅನಂತನು ಕೆಳಗೆ ಹೋಗುವನು. ಅಜ್ಜನು ಮೇಜಿನ ಮೇಲಿದ್ದ ಪತ್ರಿಕೆಯನ್ನು ತೆಗೆದುಕೊಂಡು ನೋಡುವನು. ಆದರೆ ಅವನ ಲಕ್ಷ್ಯವೆಲ್ಲ ಪಾವಟಿಗೆಗಳ ಕಡೆಗೆ. ಕೂಡಲೆ

ಬಿಂದೂರಾಯನು ಬರುತ್ತಿರುವನೆಂಬುದನ್ನರಿತು ಪತ್ರಿಕೆಯನ್ನು ಲಕ್ಷ್ಯಗೊಟ್ಟು ನೋಡುವನು. ಇಷ್ಟರಲ್ಲಿ ಬಿಂದೂರಾಯನು ಬರುವನು.)

**ಬಿಂದೂರಾಯ** :— (ಅತ್ತಿತ್ತ ನೋಡುತ್ತ ಅಜ್ಜನು ಕುಳಿತದ್ದು ಲಕ್ಷ್ಯಕ್ಕೆ ಬಾರದೆ) ಯಾರು ? ಎಲ್ಲಿ ?....ಸುಮ್ಸುಮ್ನೆ—for nothing ! · Where is this Ananta—ಎಲ್ಲಿ ಹೋದ ಇವ ಅನಂತ ?....

**ಅಜ್ಜ** :— (ಮುಗುಳ್ನಗೆಯಿಂದ) ಏ, ಬಿಂದೂ—(ಬಿಂದೂರಾಯನು ಬೆಚ್ಚಿ ನಿಲ್ಲುವನು) —ಚಹಾ ತಕ್ಕೊಳ್ಳಲಿಕ್ಕೆ ಅಂತ ನಾನೇ ಕರೆದೆ—ಒಂದಿಷ್ಟು ಮಾತಾಡೋದು ಇದೆ—(ಅವನು ಅತ್ತಿತ್ತ ಚಡಪಡಿಸುವುದನ್ನು ನೋಡಿ) ಎಲ್ಲಿ ಹೋಗ್ಬೇಕಾಗೇದೇನು—ಆಂ ?

**ಬಿಂದೂರಾಯ** :— ಎಲ್ಲಿಯೂ ಇಲ್—nowhere to go ·

**ಅಜ್ಜ** :— (ನಕ್ಕು) ಕೂತು ಹಾಗಾದ್ರೆ ಕುರ್ಚಿಯ ಮ್ಯಾಲೆ—ಕಡೆಗೆ ಒತ್ತಟ್ಟಿಗಾದ್ರೂ ನಿಲ್ಲು—ಆಂ ? ಹಹ ! (ಬಿಂದೂರಾಯನು ಅಜ್ಜನ ಬಲಬದಿಗೆ ಕುಳಿತುಕೊಳ್ಳುವನು) ಮತ್ತೆ ಯಾವ ಪುಸ್ತಕ ಬರೀತಾ ಕೂತಿದ್ದಿಯೇನು—ಆಂ ?

**ಬಿಂದೂರಾಯ** :— (ಅಜ್ಜನೊಬ್ಬನನ್ನು ಬಿಟ್ಟು ಮಿಕ್ಕ ಎಲ್ಲ ಕಡೆ ನೋಡುತ್ತ) ಪುಸ್ತಕ ಇಲ್ಲ–ಏನಿಲ್ಲ–nothing—no use at all— ಬರೆಯೋದ್ರಾಗ ಅರ್ಥವೇ ಇಲ್ಲ ...

**ಅಜ್ಜ**:— ಅಲ್ಲ—ಸುಬ್ಬಣ್ಣ ಏನೋ ಅಂಥಾಂಗ ಆಯ್ತು—

**ಬಿಂದೂರಾಯ** :— ಸುಬ್ಬಣ್ಣ ! Fool !....ಮೂರ್ಖ—ಅವಿವೇಕಿ !

**ಅಜ್ಜ** :— (ನಕ್ಕು) ಅವನ ಸಲುವಾಗಿಯೇ ಮಾತಾಡಬೇಕಾಗೇದ—ವಿಚಾರ ಮಾಡ್ಬೇಕಾಗೇದ—ಒಂದಿಷ್ಟು ಲಕ್ಷ್ಯಗೊಟ್ಟು ಮಾತಾಡಲ್ಲ—

[ಅನಂತನು ಬಿಂದೂರಾಯನಿಗೆ ಚಹವನ್ನು ತರುವನು.]

ಅನಂತಾ, ಬಿಂದೂಗ ಚಹಾ ಕೊಟ್ಟು ಕೆಳಗ ಹೋಗಿ ಇವರಿಬ್ಬರೂ ಬಂದ್ರೇನ್ನೋಡು....ಬಂದಕೂಡಲೆ ಮ್ಯಾಲೆ ಕಳುಹಿಸು—ಆಂ ?

[ಅನಂತನು ಹಾಗೆ ಮಾಡಿ ಕೆಳಗೆ ಹೋಗುವವರೆಗೆ ಇಬ್ಬರೂ ಮೌನದಿಂದ ಇರುವರು. ಆಮೇಲೆ—]

**ಅಜ್ಜ** :— ( ಪಟಿಪ ದನಿಯಲ್ಲಿ ) ಆ ಸುಬ್ಬಣ್ಣನ ಸಲುವಾಗಿಯೆ ವಿಚಾರ ಮಾಡಬೇಕಾಗೇದ—ಅಂದೆ....ಅವನ ಮದುವೆ ಆಗಿದೆ ಏನು ?

**ಬಿಂದೂರಾಯ** :— ( ಚಕಿತನಾಗಿ ) ಅವನ ಮದುವೆ !....who cares ? ಅಂಥಾಪ್ವರ ಕಾಳಜೀ ಮಾಡ್ಲಿಕ್ಕೆ ಯಾರಿಗೆ ವ್ಯಾಳ್ಯೇ ಅದ?....ಛೆ !....

**ಅಜ್ಜ** :— ( ತುಸು ಪರದಿಂದ ) ನುಂದಾಕಿನೀದು ಮದುವೆ ಆಗೇದೇನು ?

**ಬಿಂದೂರಾಯ** .— ( ಒಂದು ನಿಮಿಷ ಸಿಡಿಲು ಬಡೆದಂತಾಗಿ ) ಏನು ?.... ಆಂ?....ಹೆ–ಹೆಹೆಹೆ !....what a joke? · ನಕ್ಕಾರು ಯಾರಾದರೂ– ಹೆಹೆ !

**ಅಜ್ಜ** :— ( ಗಾಂಭೀರ್ಯದಿಂದ ) ನನಗೂ ಅದೇ ಹೆದರಿಕೆ....ಏನೆಂತಿ— ಯಾರಾದರೂ ನಕ್ಕಾರು ಅನ್ನೋದೆ ಹೆದರಿಕೆ ನನಗೂ.. (ಕುರ್ಚಿಯಿಂದ ಆಯಾಸವಾದವನಂತೆ ಏಳುತ್ತ ) ಮುಂದೂಗ ವಿಚಾರ ಅದ, ಹಾಗೆ ಕೇಳಿದರ ( ಬೆನ್ನಿಗೆ ಕೈಕಟ್ಟಿ ಒಳಗೋಣೆಯ ಬಾಗಿಲ ಕಡೆಗೆ ನಡೆಯುತ್ತ ) —ಹಾಗ ಕೇಳಿದರ—ನಿನಕಿಂತ ಜವಾಬ್ದಾರಿ ಹೆಚ್ಚು ತಿಳೀತದ ಆಕೆಗೆ—

**ಬಿಂದೂರಾಯ** :— (ಕೈಯಲ್ಲಿ ಒಂದು ವೃತ್ತಪತ್ರವನ್ನು ಸುರುಳಾಡಿಸುತ್ತ ) ಛೇ ! Who cares ?

**ಅಜ್ಜ**:— ಆದರೂ—(ಕೋಣೆಯಲ್ಲಿ ಏನನ್ನೊ ದಿಟ್ಟಿಸುವವನಂತೆ ನೋಡುತ್ತ)— ಆಯುಷ್ಯದೊಳಗ ಒಂದು ವಿಷಯದೊಳಗ ಒಮ್ಮೆ ಯಾವನಾದರೂ ಪರತಂತ್ರ ಆಗ್ಲಿಕ್ಕೇ ಬೇಕು....ಸೃಷ್ಟಿಯ ನಿಯಮಕ್ಕ ಆಹುತಿ ಆಗ್ಲೇ ಬೇಕು....( ತಡೆದು ಒಮ್ಮೆಲೆ ತಿರುಗಿ ಮಗನನ್ನು ದಿಟ್ಟಿಸುತ್ತ) ಮುಂದೂನ ಬಗ್ಗೆ ಈ ವಿಚಾರ ಮಾಡೀದಿ ಏನು ಎಂದಾದರೂ ?

**ಬಿಂದೂರಾಯ** :—( ಪೆಚ್ಚಾಗಿ ತಂದೆಯನ್ನು ಮಂತ್ರಮುಗ್ಧನಂತೆ ನೋಡುತ್ತ) What an idea ! ·· ಅಲ್ಲ....ಮುಂದೂನ ಬಗ್ಗೆ ನಾ ಯಾಕ ವಿಚಾರ ಮಾಡ್ಬೇಕು—ಅಂತ ?....ತಿಳೀತದ ಆಕೀಗೆ, ತನ್ನ ಕಾಳಜಿ ತಾ ಮಾಡಿಕೊಳ್ಳೋವಷ್ಟು—She knows—

ಅಜ್ಜ :— ( ನಡುವೆಯೇ ) —to look after herself !... ಅಹುದಲ್ಲೊ ? ....ಆಂ ?....ಆದ್ರೆ ಮಕ್ಕಳು ಬೆಳೀತಾವಂತ ಹಡೆದವರು ಬೆಳೆ- ಯೋದನ್ನೆ ಬಿಡಬೇಕಂತೀ ಏನು ?

ಬಿಂದೂರಾಯ :— ( ತುಸು ಗಟ್ಟಿಯಾಗಿ ) Nature's law !. ಬೆಳೆಪವ್ರು ತಂ ಕಾಳಜಿ ತಾವ್ರು ಮಾಡಿಕೋಬೇಕು—

ಅಜ್ಜ :— ( ಅಸಹನೆಯಿಂದ) ಅಹುದೊ !....ಆದ್ರೆ ಆಕೆ ಬೆಳೆವಾಳಂತ ನೀನೂ ನಾನೂ ಆಕೆಯ ಮುಂದೆ ಒಪ್ಪೊಂಡೀವೇನು ?.... ( ತಡಮ, ಮೆಲ್ಲಗೆ ಹೆಜ್ಜೆಗಳನ್ನಿಡುತ್ತ) ಮುಂದೂಸದ ಕಾಳಜಿ ನನಗ....ಆ ಸುಬ್ಬಣ್ಣನ ಮ್ಯಾಲೆ ವಿಶ್ವಾಸ ಇಲ್ಲ....ಯಾರು ಅವ ?....

ಬಿಂದೂರಾಯ :— He is a fool—

ಅಜ್ಜ :— ( ಸಿಟ್ಟಿನಿಂದ ) ಅಹುದೊ ! ಹೇಳಿದ್ದನ್ನೆ ಹೇಳ್ತೀಯಲ್ಲ? ...ಆಂ?... ಅವ ಹುಚ್ಚ....ಆದ್ರೆ ಹುಚ್ಚನ ಜೋಡಿ ಬಿದ್ದು ನಾವೂ ಹುಚ್ಚಾಗ- ಬಾರ್ದು ಅಂತ—

ಬಿಂದೂರಾಯ :— ( ಏಳುತ್ತ ) ಅಂಥಾದ್ದೇನಾಗೇದ—I don't know what's happened—ಅಲ್ಲ—

ಅಜ್ಜ :— ( ಎಡದ ಕುರ್ಚಿಯ ಕಡೆಗೆ ನಡೆಯುತ್ತ) ಅಲ್ಲ ಯಾಕೆ, ಅಹುದು... ಕೂಡಲ್ಲ ನೀನು....( ತಾನು ಮೊದಲು ಎಡದ ಕುರ್ಚಿಯಲ್ಲಿ ಕೂತು ).... ಕೂಡು ಅಂದೆ ...( ಬಿಂದೂರಾಯನು ನಿರುಪಾಯನಾಗಿ ಕೂತುಕೊಳ್ಳು- ವನು )....ನಾನು ಮುದುಕ ಆದೆ....ನನ್ನ ಬಗ್ಗೆ ಕಾಳಜೀ ಮಾಡೋದು ಏನಿದೆ—ಆ ?....ಅವಕೇ ಮುಂದಿಯ ಕಾಳಜ ಮಾಡ್ತೀನೊ ಏನೊ ?....( ಆರ್ಥ ತಸ್ಸಸ್ಟಕ್ಕೆ ) ಮುದುಕ ಆದೆ....ಎಂಟು ದಿವಸ ಆದರೂ ಮರೆತು ಮ್ಯಾಲಿನ ಕೋಣೆಗೇ ಬರ್ತೀನಿ....ಮರೆತು—ಈ ಹೊತ್ತು ಮುಂದೂನ ಟೇಬಲ್‌ನ ಮ್ಯಾಲಿನ ಕಾಗದ ನೋಡಿದೆ.... ಅವನ ಪತ್ರ ಇದ್ದುವು—ಅಂದೆ ...ಆದಕ್ಕೇಳಿದೆ ಯಾರು ಆತ—

ಬಿಂದೂರಾಯ :—( ಕನಲಿ ) He is a fool... ಪತ್ರ ಬರೆದಾನ ಅಂದ್ರ— he is a double fool .

ಅಜ್ಜ :— ಮದುವೆ ಅಂದ್ರ ಯಾವಾಗಲೂ double fool ಏ !....

**ಬಿಂದೂರಾಯ** :— ( ಏಳುತ್ತ ) ಛೆ! ಶಕ್ಯನೆ ಇಲ್ಲ....it's impossible... ಅವನ ಪತ್ರಗಳಿಗೆ ನಾವು ಯಾಕ ಹೆದರ್ಬೇಕು? ... ಆ ಪತ್ರಗಳಿಗೆ ಉತ್ತರ ಎಲ್ಲಿದೆ ?....

**ಅಜ್ಜ** :— ( ತುಸು ಕಸಲಿ ) ನಿನಗ ವ್ಯವಹಾರದ ಬುದ್ಧಿ ಯಾವಾಗ ಬರೋದು ಅಂತೀನಿ, ಬಿಂದೂ ?....ಪತ್ರಗಳಿಗೆ ಉತ್ತರ ಎಲ್ಲಿದೆ— ಅಂದ್ರೆ ? ...ಇದ್ದರೆ ಅವನ ಮನೆಯೊಳಗೆ ಇರೋದು....

**ಬಿಂದೂರಾಯ** :— ಅಷ್ಟು ಯಾಕೆ ?....ಮಂದೂನ್ನೇ ಕೇಳಿಬಿಟ್ಟರಾಯಿ-ತಲ್ಲ ? We shall ask Mandoo herself—

**ಅಜ್ಜ** :— ( ಅಸಹನೆಯಿಂದ ) ಸಾಕು, ಹೋಗೋ ! ನಿನ್ನಿಂದ ಸಹಾಯ ಸಿಕ್ಕೀತು ಅಂತ ತಿಳಿಯೋದೆ ಮೂರ್ಖತನ—ಹೋಗು ! ( ಬಿಂದೂ ನಿಂತುಕೊಳ್ಳುವನು ) ಆಕೀನ್ನ ಕೇಳ್ತಾನಂತ !....ಏನಂತ ?.... "ಇಲ್ಲ" ಅಂದ್ರೆ—ಆಕೆಯ ಮದುವೆಯ ಚಿಂತೆ...."ಅಹುದು" ಅಂದ್ರೆ ಆಕೆಯ ಮದುವೆ ಆಗೋದು ಅನ್ನೋ ಚಿಂತೆ—

**ಬಿಂದೂರಾಯ** :— ತನ್ನ ಮನಸ್ಸಿದ್ದಂತೆ ಮಾಡಿಕೊಳ್ಳಲಿ—let her marry—

**ಅಜ್ಜ** :— ಅದೇ ನನಗೆ ಚಿಂತೆ ...

**ಬಿಂದೂರಾಯ** :— ( ಚಕಿತನಾಗಿ ) ಏನು ?

**ಅಜ್ಜ** :— ( ಮಾತಾಡಬೇಕೆಂದು, ಮತ್ತೆ ಕೂಡಲೆ ವಿಚಾರ ಬದಲಾಯಿಸಿ ) ಏ— ನ್—ಏ—ನಿಲ್ಲ....

[ ಇಬ್ಬರೂ ಕೆಲಹೊತ್ತು ಸುಮ್ಮನಾಗುವರು. ಬಿಂದೂರಾಯನು ಅತ್ತಿತ್ತ ನೋಡುತ್ತ ಕ್ರಮೇಣ ಮೆಲ್ಲಗೆ ಹೆಜ್ಜೆಗಳನ್ನಿಡುತ್ತ ಕೆಳಗಿಳಿದು ಹೋಗುವನು. ಕೆಳಗಿಳಿಯುವಾಗ ಪಾವಟಿಗೆಯ ಒಂದೊಂದು ಸದ್ದು ಕೇಳುವುದು. ಮುದುಕನ ಲಕ್ಷ್ಯ ಆ ಕಡೆಗಿದೆ. ಕೊನೆಯ ಸದ್ದು ಶಾಂತವಾದನಂತರ ಮುದುಕನು ಪಾವಟಿಗೆಯನ್ನೆ ದಿಟ್ಟಿಸುತ್ತ, ಪಟಗುಟ್ಟುವವನಂತೆ ]

**ಅಜ್ಜ** :— ಅದೇ ನನಗೆ ಚಿಂತೆ....ಮಂದೂ ಹೋದರೆ, ಮನೆ ಹೋಯಿತು. ಮನೆತನ ಮುಗಿಯಿತು....ಯಾವ ಕಾಲದ ಶಾಪ ತಟ್ಟಿದೆಯೊ ?.... ಈ ಮನೆಯಲ್ಲಿ ಹೊರಗಿನಿಂದ ಬಂದ ಹೆಂಗಸರು ದಕ್ಕುವದೆ ಇಲ್ಲ.... ಇಲ್ಲಿಯೆ ಹುಟ್ಟಿದಾಕೆಯನ್ನು ಉಳಿಸಿಕೊಳ್ಳಬೇಕೆಂದರೆ— ಸೃಷ್ಟಿಯ

ನಿಯಮ! [ ಅನಂತನು ಬರಲು ತಟ್ಟನೆ ಕೈಬಡಿಗೆಯನ್ನು ತೆಗೆದುಕೊಂಡು ಎದ್ದು ನಿಂತು—] ಇನ್ನೂ ಬರಲಿಲ್ಲ ಅಲ್ಲ ಅವರಿಬ್ಬರೂ? ಇರ್ಲಿ ಬಿಡು....ಮುದುಕ ನಾನು ಸ್ವಲ್ಪೇ ಆಯುಷ್ಯ ಉಳಿದಿದ್ದರೂ ಹೊತ್ತು ಜಡ ಆಗಿ ಬಹಾಳ ದಿವಸ ಬದುಕಿಧಾಂಗ ಅನ್ನಿಸತದ—ಆಂ? (ಹೊರಟು) ಅನಂತಾ, ಈ ಒಂದು ದೊಡ್ಡ ಕುರ್ಚೀನ್ನ ಕೆಳಗೆ ನನ್ನ ಕೋಣೆಯೊಳಗ ತಂದಿಡಲಿಕ್ಕೆ ಹೇಳು ಚೆನ್ನಗ ...( ಪಾವಟಿಗೆಗಳ ಹತ್ತಿರ ಬಂದು) ನಡೀಲಿಕ್ಕೆ ಕಾಲು ಗಟ್ಟಿ ಇಲ್ಲ, ಕೂಡಲಿಕ್ಕೆ ಬೆನ್ನು ಗಟ್ಟಿ ಇಲ್ಲ—ಆಂ?—ಇನ್ನ ವಾನಪ್ರಸ್ಥ ಆಶ್ರಮಧಾಂಗ ಆರಾಮ ಕುರ್ಚೀನೇ ಗತಿ....ಆಂ?....ಹಹ (ಎಂದು ತನ್ನಷ್ಟಕ್ಕೆ ನಗುತ್ತ ಕೆಳಗಿಳಿದು ಹೋಗುವನು)

[ ಅನಂತನು ಒಂದು ನಿಮಿಷ ಗೌರವಸೂಚಕ ಮೌನದಿಂದ ನೋಡುವನು. ಮುದುಕನು ಕೆಳಗಿಳಿಯುವ ಸದ್ದು ಶಾಂತವಾಗುವವರೆಗೂ ಹಾಗೆಯೆ ನಿಂತು ಆಮೇಲೆ ಮೆಲ್ಲಗೆ ಪಾವಟಿಗೆಯ ಹತ್ತಿರ ಬಂದು ಕೆಳಗೆ ನೋಡಿ 'ಚೆನ್ನಾ, ಚೆನ್ನಾ' ಎಂದು ಕರೆಯುವನು. ಇಷ್ಟರಲ್ಲಿ 'ಬಂದ್ನಿ ಅಂತಪ್ಪಾ' ಎನ್ನುತ್ತ ಚೆನ್ನನು ಧಾವಿಸುತ್ತ ಮೇಲೆ ಬಂದು, ಪಾವಟಿಗೆಯ ಬಾಗಿಲಿಗೆ ನಿಂತ ಅನಂತನನ್ನು ನೋಡಿ ಗಕ್ಕನೆ ತಡೆಯುವನು. ಒಂದು ನಿಮಿಷ ಬೆಪ್ಪನಂತೆ ಅನಂತನನ್ನು ಮಿಕಿಮಿಕಿಸುತ್ತ ನಿಲ್ಲಲು—]

**ಅನಂತ** :— (ನಕ್ಕು) ಹೀಂಗ್ಯಾಕ ನಿಂತೆಯೊ? ದೆವ್ವ ಬಡಕೊಂಡದೊ, ಏನ ದೆವ್ವ ನೋಡಿದ್ಯೊ?

**ಚೆನ್ನ** :— (ಉಸಿರೆಳೆದು) ಅದೊಂದೇ ಉಳಿದೇತಿ, ಅನಂತಪ್ಪಾ, ಈ ಮನ್ಯಾಗ....ಕೆಳಗ ನಿಂತಿದ್ನಿ, ಅಟರಾಗ ದೊಡ್ಡ ಅಜ್ಜನೋರ ಸವಾರಿ ಇಳೀತಾ ಬಂತು; ಎಲ್ಲಿ ನನ್ನ ನೋಡ್ತಾರೊ—ಯಾಕಂದ್ರ ನಾ ಇದ್ನಿ ಹೀಂಗ—(ಬರಿ ತಲೆ, ತೋಳು ಏರಿಸಿದ್ದಾನೆ, ದೋತರ ಮೊಳಕಾಲ ಮೇಲೆ—ಇದನ್ನೆಲ್ಲ ಸೂಚಿಸಿ)—ಅದಕ. ಎಲ್ಲಿ ನನ್ನ ನೋಡ್ತಾರೊ. ಅಂತ ಮರೀ ಆಗಾಣ ಅಂದ್ರ—ಪಿಳಿಪಿಳಿ ಇದಿರು ಕಣ್‌ಬಿಡಕೊಂತಾನೇ ಹೋತು ಸವಾರಿ! "ಎಲೆಲೆ! ಏನೊ ಆಗೇತಿ ಅನರ್ಥ" ಅಂದುಕೋತಿದ್ದಿನಿ, ಅಟರಾಗ ನೀ ಒದರಿದಿ. "ಥೂ! ನಿನ! ಏನೋ (ಘಾ) ಗಾತಾ ಆಗೇ ಬಿಟ್ಟಿತು" ಅಂತ ಬಂದ್ನಿ ಬಡಕೊಂತಾ—

**ಅನಂತ** :— ( ನಡುವೆಯೆ ) ಅದಿರ್ಲಿ—ಆ ದೊಡ್ಡ ಕುರ್ಚಿ ಕೆಳಗ ದೊಡ್ಡಜ್ಜ ಅವರ ಕೋಣೆಯೊಳಗ ಇಡು—ಎತ್ತು.

**ಚೆನ್ನ** :—( ನೆಂಪುಕೊಂಡು ) ಎಲ! ನಾಯೇನ ಕೆಲಸಾ ತಪ್ಪಿಸಾಕ ನಿಂತವರಾಂಗ ಹೇಳ್ತೀಯಲ್ಲೊ, ಅಂತಪ್ಪಾ ! ನೀ ಕೇಳಿದಿ ಏನಾಗೇದ ಅಂತ, ಅದಕ—

**ಅನಂತ** :— ( ಬೇಜಾರದ ಧನಿಯಲ್ಲಿ ) ಹೌದೊ !—ಅದಕ ನೀ ಹೇಳಿದಿ, ನಾ ಕೇಳಿದೆ. ಮುಗೀತಲ್ಲ. ಲಗೂ ಕುರ್ಚಿ ಎತ್ತು, ನಾ ಎಷ್ಟೊತ್ತು ನಿಲ್ಲಲಿ ಇಲ್ಲಿ ?

**ಚೆನ್ನ** :— ( ಚಕಿತನಾಗಿ ) ಅಂದ್ರ ...ನನಗೊಬ್ಬಗೇ ಆ ಕುರ್ಚೀ ಎತ್ತಾಕೇ ಬರೋದಿಲ್ಲ ಅಂತೀ ಏನು ?

**ಅನಂತ** :— ( ವ್ಯಂಗ್ಯ ನಗೆಯಿಂದ ) ಕುರ್ಚೀನೇ ಯಾಕ, ಬೇಕಾದ್ದನ್ನ ಎತ್ತುವ ನೀನು. ಅದಕ್ಕ ನಾ ನಿಂತೀನಿ ಇಲ್ಲಿ.

[ ಇಷ್ಟರ ವರೆಗೆ ಇಬ್ಬರೂ ಕೋಣೆಯ ನಡುವೆ ಬಂದಿದ್ದಾರೆ. ಅನಂತ ಚದರ ಪಾತ್ರೆಗಳನ್ನು ಸಾವರಿಸುತ್ತಿದ್ದಾನೆ. ಚೆನ್ನ ಕುರ್ಚಿಗೆ ಕೈಹಾಕಿದ್ದಾನೆ. ]

**ಚೆನ್ನ** :— ( ತಡೆದು ) ಏನಂದಿ ?

**ಅನಂತ** :—( ದರ್ಪದಿಂದ ) ಕೇಳಿಸಲಿಲ್ಲೇನು ?

**ಚೆನ್ನ** :— ಕೇಳಿಸಿತು, ಆದ್ರ ಅದೇ ಕರೇವೇನೂ—ಅಂತ—

**ಅನಂತ** :— ( ಮಾತು ಹಾರಿಸಬೇಕೆಂದು ) ಸುಮ್ಮನೆ ಹೊತ್ತು ಕಳೀಬ್ಯಾಡ, ನಡಿ, ಎತ್ತು ಮೊದಲು.

**ಚೆನ್ನ** :— ( ಬುದ್ಧಿಪೂರ್ವಕವಾಗಿ ಕುರ್ಚಿಯಿಂದ ದೂರ ಸರಿದು ) ಅಂತಪ್ಪಾ, ಇಲ್ಲಿ ನಿಂತ ಮೆಟ್ಟಗೀವ್ಯಾಗ ಖರೇ–ಖೊಟ್ಟಿ ಆಗ್ಬೇಕು, ಅಲ್ಲಿತನಕ ನಾವಿಬ್ಬರೂ ಇಲ್ಲೇ— ( ಬಾಗಿಲಿಗೆ ಅಡ್ಡವಾಗಿ ನಿಲ್ಲುವನು )

**ಅನಂತ** :— ( ಏನೂ ತಿಳಿಯದವನಂತೆ ) ಯಾತರದೊ—ಖರೇ–ಖೊಟ್ಟಿ ?

**ಚೆನ್ನ** :— ( ಅತ್ತಿತ್ತ ನೋಡಿ ) ನಾ ಬೇಕಾದ್ದನ್ನ ಎತ್ತುವವ ಅಂದೆಯಲ್ಲ ?

**ಅನಂತ** :— ಹೌದು.

**ಚೆನ್ನ** :— ( ತುಸು ಸಿಟ್ಟಿನಿಂದ ) ಅಂಥಾ ಮಾತು ಅಂದೆ ಹ್ಯಾಂಗ ನೀನು ?

**ಅನಂತ** :— ( ಚಪಡ ಪಾತ್ರೆಗಳನ್ನು ಪ್ರದರ್ಶಿಸಿಟ್ಟು, ಪ್ರೀತ್ಯಯು ಸ್ಮಿತಿಯಿಂದ ) ಹ್ಯಾಂಗಂದ್ರ ? ಗೊತ್ತಿತ್ತು, ಅಂಡೆ....ನೀನೇ ಹೇಳಲಿಲ್ಲೇನು ಸುಬ್ಬಣ್ಣ ವಕೀಲರ ಮುಂದೆ ಆ ದಿನ, ನೀನೂ ಜೇಲಿನೊಳಗ ಇದ್ದಿ ಅಂತ ?

**ಚೆನ್ನ** :— ( ಅಭಿಮಾನದಿಂದ ) ನಾ ಜೇಲಿಗೆ ಹೋದದ್ದು ಚಳವಳಿಯೊಳಗ ದರೋಡೆ ಮಾಡಿ....ಗಾಂಧೀವಾತ್ಮರ ಚಳವಳೀವಳಗ—

**ಅನಂತ** :— ( ನಕ್ಕು ) ಅದೇ ನನಗ ಗೊತ್ತಿತ್ತು ಅಂದೆ—ನೀನು ದರೋಡೆ ಮಾಡಿದವ ಅಂತ....ಅದಕೇ ಮುಂದಾಕಿನೀ ಅವರಿಗೆ ಹೇಳಿದೆ—

**ಚೆನ್ನ**:— ( ನಡುವೆಯ ಗಾಬರಿಯಿಂದ ) ಹೇಳಿದಿ ? ಏನಂತ ಹೇಳಿದಿ ?

**ಅನಂತ** .— ( ಲಕ್ಷ್ಯವಿಲ್ಲದವನಂತೆ ) ಅದ್ರ ಅವರಿಗೆ ಮೊದಲೇ ಗೊತ್ತಿತ್ತಂತ—

**ಚೆನ್ನ** :— ( ಗಾಬರಿಯಿಂದ ಪನ ಸಾಲದೆ ) ಏನ್–ಏನ್–ಗೊತ್ತಿತ್ತು ?

**ಅನಂತ** :— ( ನಗೆಯಿಂದ ) ಗಾಂಧಿಯವರಿಗಿಂತ ಒಂದು ತಿಂಗಳ ಮುಂಚೇನೀ ನಿನ್ನ ಚಳವಳಿ ಮಾಡಿದ್ದಿ ಅಂತ—

**ಚೆನ್ನ** :— ( ಅತ್ತಿತ್ತ ನೋಡುತ್ತ, ಹಣೆಯ ಬೆವರೊರೆಸಿಕೊಳ್ಳುತ್ತ, ದೈನ್ಯದಿಂದ ) ಅನಂತಪ್ಪಾ—

**ಅನಂತ** :— ಹುಂ—ಕುರ್ಚಿ ಎತ್ತು ಇನ್ನ.

**ಚೆನ್ನ** .— ( ಮೆಲ್ಲಗೆ ನಡೆದು ಕುರ್ಚಿಯನ್ನೆತ್ತುತ್ತ ) ಒಂದೇ ತಿಂಗಳ ಹೆಚ್ಚ-ಕಡಿಮೆ ಆಗಿ ಘೋಟಾಳಿ ಆಯ್ತು, ಅನಂತಪ್ಪಾ....ನಮ್ಮೇ ಓಣ್ಯಾಗ ಇನ್ನೊಂದು ಕಂಪೂದವರು ಒಂದು ತಿಂಗಳ ಮ್ಯಾಗ ನಾಧಿಸಿ-ಕೊಂಡರು, ಮಾರವಾಡಿ ಮನೆ ಒಡೆದು, ಈಗ ಅವರು ಊರ ಕಾಂಗ್ರೆಸಿಗೆ ಅರಸರಾಗ್ಯಾರ....ಎಂದಾದರೂ ಯಬ್ಬ ನನ್ನ ನಶೀಬ!... ( ಎಂದು ಕುರ್ಚಿಯನ್ನೆತ್ತಿಕೊಂಡು ಅನಂತನಿಗೆ ಇದಿರಾಗಿ ನಿಂತು ) ನಾನೂ ಮುಂದಾಗೀನಿ, ( ವ್ಯಂಗ್ಯ ನಗೆಯಿಂದ ) ಆದ್ರ ಅವರ್ಹಾಂಗ ನನ್ನಿಂದ ವೋಟು ಕೊಡೋವ್ರಿಲ್ಲ, ಏಟು ಕೊಡೋವ್ರು. ( ಎಂದು ತಲೆ ಅಲ್ಲಾಡಿಸುತ್ತ ಮುಂದಾಗಿ ನಡೆಯುವಾಗ—)

**ಅನಂತ** :— ಹಾಂ—ಕುರ್ಚಿ ಹೇರಿಕೊಂಡು ತಲೆ ಅಲ್ಲಾಡಿಸಬ್ಯಾಡ—ಗೊತ್ತದ ನಿನಗ ತಲೆ ಇದ್ದದ್ದು.

**ಚೆನ್ನ** :—(ಒಂದು ಪಾವಟಿಗೆ ಇಳಿದು ಗಕ್ಕನೆ ತಿರುಗಿ ನಿಂತು) ಅನಂತಪ್ಪಾ—

**ಅನಂತ** :— (ಕಸಲಿ) ಲಗೂನೇ ಕೆಳಗಿಳಿಯೊ!

**ಚೆನ್ನ** :— (ಪಿಲುಗನಿಯಲ್ಲಿ) ಕೆಳಗ ಅವ್ವಾ ಅವರು ಬಂದ್ರು ಅಂತ ಕಾಣ್ತದ, ಇಲ್ಲೇ ಇಡಲ್ಯಾ—ಅವರು ವ್ಯಾಗ ಬರೋಮಟ ತಡೀಲ್ಯಾ—

**ಅನಂತ** :— (ಅವಸರ ಮಾಡುತ್ತ) ಭರಾಭರಾ ಇಳಿ ನೋಡೋಣ—

**ಚೆನ್ನ** :— (ಅಡ್ಡಗಟ್ಟಿ ನಿಂತು) ಅಂದ್ರ ನೀ ಯಾರ ಮುಂದೂ ಹೇಳೋದಿಲ್ಲ ಹೌದಲ್ಲೊ?

**ಅನಂತ** :— ನಡೀ ಮೊದಲು!

**ಚೆನ್ನ** :— ನೀ ತುಟಿ ಬಿಚ್ಚಾಕಿಲ್ಲ ಅಂದ್ರ ನಡೀತೀನಿ, ಇಲ್ಲಾ ಅಂದ್ರ ಇದನ್ನ ಇಲ್ಲೇ ಒಗೆದು—(ಕೆಳಗಿಡುವವನಂತೆ ನಟಿಸುವಾಗ)

**ಅನಂತ** :— (ಸಿಟ್ಟಿನಿಂದ) ಇಲ್ಲ, ನಡೀಯೊ! ಏನು ದೊಡ್ಡ ಮನುಷ್ಯ ಅಂತ ನಿನ್ನ ಸಲುವಾಗಿ ಮುಂದಿ ಮುಂದ ಮಾತಾಡ್ಲಿ?

**ಚೆನ್ನ** :— ಅದೂ ಕರೇವೆ....ಆದ್ರೂ ಮದ್ಲೀಗೆ ಗಟ್ಮುಟ್ಟಿ ಮಾಡಿ-ಕೊಳ್ಳೋದು ಬೇಶಿ ಅಂತ—

[ಎಂದು ಮತ್ತೆ ತಿರುಗಿ ಪಾವಟಿಗೆಗಳನ್ನು ಇಳಿಯತೊಡಗುವನು]

[ಕೆಳಗಿನಿಂದ 'ಅನಂತಾ' ಎಂದು ಮಂದಾಕಿನಿಯ ದನಿ. ಅನಂತ ಮೇಲಿ-ನಿಂದಲೆ 'ಬಂದೆ' ಎಂದು ಚೆನ್ನನನ್ನು ನೂಕುವನು. ಇಬ್ಬರೂ ಅವಸರವಸರವಾಗಿ ಇಳಿದು ಹೋಗುವರು.]

[ಒಂದು ನಿಮಿಷದಲ್ಲಿ ಪಾವಟಿಗೆಯನ್ನು ಏರಿಬರುತ್ತಿರುವ ಸದ್ದು. ಅದ-ರೊಡನೆಯೆ ಕ್ರಮೇಣ ಸುಬ್ಬಣ್ಣನ ಹಸನ್ಮುಖ, ಪಸನಾದ ಬಟ್ಟೆಗಳನ್ನು ಧರಿಸಿದ ದೇಹ ಕಂಡುಬರುವುವು. ಸುಬ್ಬಣ್ಣನು ಸುತ್ತಲೂ—ಹೊಸ ಕಟ್ಟಡವನ್ನು ನೋಡುವ ಹುಡುಗನಂತೆ—ನೋಡುತ್ತ ಬರುವನು. ಮೊದಲಿನ ಒಂದೆರಡು ಮಾತುಗಳನ್ನು ಹಾಗೆ ನೋಡುತ್ತಲೆ ನುಡಿಯುವನು. ಅವನ ಹಿಂದಿನಿಂದ ಮಂದಾಕಿನಿ ಬರುವಳು. ತಲೆಗೂದಲು ಅವಳು ಹೊರಗೆ ತಿರುಗಾಡಿ ಬಂದುದನ್ನು ಸೂಚಿಸುತ್ತಿದೆ. ಮುಖದಲ್ಲಿ ಬಿಸಿಲಿನ ಕೆಂಪು, ತುಸು ದಣಿವು ಕಾಣುತ್ತಿವೆ. ಸುಬ್ಬಣ್ಣ ನೋಡುತ್ತಲೆ:—"ಇರೋ ಜಾಗ ಬದಲಾದ್ರೆ ಇದ್ದ ಜಗತ್ತೇ ಬದಲಾಧಾಂಗಾಗ್ತದ" ಎನ್ನುವಾಗ ಮಂದಾಕಿನಿ (ಕೆಳಗೆ ನೋಡುತ್ತ) :—"ಹೊತ್ತಾಗೇದ, ಬರೀ ಚಹಾ ತಂದ್ಬಿಡು, ಅನಂತಾ" ಎನ್ನುವಳು. ಅಷ್ಟರಲ್ಲಿ ಆಕೆಗೆ ಸುಬ್ಬಣ್ಣ ಮಾತನಾಡಿದ್ದು ಲಕ್ಷ್ಯಕ್ಕೆ ಬಂದು—]

**ಮಂದಾಕಿನಿ :—** ಏನೊ ಆದಿರಲ್ಲ ?

**ಸುಬ್ಬಣ್ಣ :—** ( ಮೆಲ್ಲಗೆ ಅತ್ತಿತ್ತ ಹೆಜ್ಜೆಗಳನ್ನಿಡುತ್ತ ) ಇರೋ ಜಾಗ ಬದಲಾದ್ರೆ ಇದ್ದ ಜಗತ್ತೇ ಬದಲಾಧಾಂಗಾಗ್ತದ—ಅಂದೆ.

**ಮಂದಾಕಿನಿ :—** ( ಮುಂದೆ ನಡೆದು, ಮೇಜಿನಮೇಲಿನ ವೃತ್ತಪತ್ರಗಳನ್ನು ಸಾವರಿಸುತ್ತ) ಹುಂ—

**ಸುಬ್ಬಣ್ಣ :—** ( ತನ್ನ ಮಾತನ್ನೆ ಮುಂದರಿಸುತ್ತ ) ಕೆಳಗ ಇತ್ತು ನಿನ್ನ ಕೋಣೆ, ಆಗ ಒಂದು ತರ ಕಾಣ್ತಿತ್ತು ; ಈಗ ಮ್ಯಾಲೆ ಬಂದೀದಿ, ಇದೊಂದು ವೈಭವ ಬ್ಯಾರೇನೆ.

**ಮಂದಾಕಿನಿ .—** ( ಬಲಬದಿಯ ಕೋಣೆಯ ಕಡೆಗೆ ನಡೆಯುತ್ತ ) ಇದ್ದ ಜಗತ್ತು ಬದಲಾಗ್ತದೊ, ಏನು ನೋಡೋ ಕಣ್ಣು ಒದಲಾಗ್ತಾವೊ ?

**ಸುಬ್ಬಣ್ಣ :—** ( ಎದುರಿನ ಉಪ್ಪರಿಗೆಯ ಬಾಗಿಲಿಗೆ ಬಂದು ) ಆದೂ ಏನು ಸುಳ್ಳಲ್ಲ ; ಆದ್ರೂ ಹೇಳೋದು ಕಷ್ಟ ; ( ತಿರುಗಿ ನಿಂತು ಮಂದಾಕಿನಿಯನ್ನು ನೋಡುತ್ತ ) ದಿನದಿನಕ್ಕ ಕಣ್ಣು ಕುಕ್ಕುತಾ ನಡೆದಾವು ನನ್ನುವು ( ಮುಗುಳ್ನಗೆಯನ್ನು ಬೀರುವನು )

**ಮಂದಾಕಿನಿ :—** ( ಮುಗುಳ್ನಗೆಯಿಂದಲೆ ) ಟೇಬಲ್ ಮ್ಯಾಲೆ ಪೇಪರ ಇವೆ ; ಈಗ ಅನಂತ ಚಹ ತರ್ತಾನ ; ಕೂಡಿರಿ, ನಾ ಬಂದೆ ( ಎಂದು ಕೋಣೆಯೊಳಗೆ ಹೋಗುವಳು )

*[ ಸುಬ್ಬಣ್ಣನು ಕೂಡಬೇಕೆಂದು, ವಿಚಾರ ಬದಲಾಯಿಸಿ ಮತ್ತೆ ಉಪ್ಪರಿಗೆಯ ಬಾಗಿಲಿಗೆ ಹೋಗಿ ಒಂದು ನಿಮಿಷ ಹೊರಗೆ ನೋಡಿ—ಮೆಲ್ಲನೆ ಮತ್ತೆ ನಡೆದು ಬಂದು—ಎದುರಿನ ಕುರ್ಚಿಯಲ್ಲಿ ಕೂಡ್ರುವನು. ಪೇಪರ್ ನೋಡುವುದಿಲ್ಲ. ಮೇಜಿನ ಮೇಲೆ ಬೆರಳಿನಿಂದ ಬಾರಿಸುತ್ತಲಿದ್ದಾನೆ. ಆಮೇಲೆ—ಒಮ್ಮೆಲೆ ಒಳಗಿನಿಂದ ಏನನ್ನೋ ಕೇಳಿದಂತೆ ಮಾಡಿ—]

**ಸುಬ್ಬಣ್ಣ :—** ಆಂ ? ಏನಂದೆ ? ( ನಕ್ಕು ) ಇದ್ದೀನಿ—ಓಡಿ ಹೋಗಿಲ್ಲ.... ಏನಿಲ್ಲ—ಹೀಗೇ ವಿಚಾರ ನಡೆಸಿದ್ದೆ...ಪೇಪರ್—?....ಅಹುದಹುದು,

---

* ನಟನಿಗೆ ಸೂಚನೆ :—ಇಲ್ಲಿಂದ ಮುಂದಿನ ಮಾತು ಮುಗಿವವರೆಗೆ ಸಾವಕಾಶವಾಗಿಯೆ ತಿರುಗಾಟವನ್ನಾಗಲಿ, ಮಾತನ್ನಾಗಲಿ ನಡೆಸಬೇಕು. ಅದು ಅಗತ್ಯ ಎಂಬುದು ಮಾತು ಮುಗಿವ ಮೇಲೆ ತಿಳಿಯುವುದು.

ಇಲ್ಲಿಯೆ ಇವೆ ...ಅವೇ. ನೋಡ್ತೀನಿ. ( ಪೇಪರುಗಳನ್ನು ಒಂದೊಂದಾಗಿ ಎತ್ತಿ ನೋಡುತ್ತಾ ಮಾತಾಡುತ್ತಲಿದ್ದಾನೆ ) ಪೇಪರಿಗೆ ಏನು ಮಹತ್ವವೇ ಉಳಿದಿಲ್ಲ ಹಾಂಗ ಕೇಳಿದರ....ಇದೇ ಈಗ ಹೇಳಿದ ಮಾತೇ ನೆನಪಿಗೆ ಬರ್ತದ....ಇರೋ ಜಾಗ ಬದಲಾದ್ರೆ ಇದ್ದ ಜಗತ್ತೇ ಬದಲಾಗ್ತದ ಅಂತ— ( ಒಳಗೆ ನೋಡಿ) ನನ್ನ ಬಾಯಿಯಿಂದ ಆದು ವೇದವಾಕ್ಯ ಬಂಧಾಂಗ ಬಂದಿದೆ ನೋಡು....ಆಂ ?....ಅಲ್ಲ, ನೋಡು, ಎಲ್ಲಿಯ ತನಕ ಸ್ವಾತಂತ್ರ್ಯದ ಸಲುವಾಗಿ ಹೋರಾಡ್ತಿದ್ದಿವಿ—ಅಲ್ಲಿಯ ತನಕ ಸುದ್ದಿಗೊಂದು ಮಹತ್ವ ಇತ್ತು....ಇಷ್ಟು ಯಾಕ ?....ಇದೇ ಕನ್ನಡ ಪೇಪರಿನೊಳಗ ನನ್ನೂ ನಿನ್ನೂ ಹೆಸರೇ ಎಷ್ಟು ಸಲ ಬಂದಿಲ್ಲ ?....ಎಷ್ಟು ಸಲ ಏನು ?....ಒಂದಿಲ್ಲ ಒಂದು ನಿಮಿತ್ತಕ್ಕ ದಿನಾಲು ಬರ್ತಾನೇ ಇತ್ತು....ಅಲ್ಲ, ಮಿಸ್ ಮಂದಾಕಿನೀ, ಮಾತಿಗೆ ಮಾತು ನೆನವಾಯ್ತು....ಇನ್ನ ನನ್ಗೂ ನಿನ್ಗೂ ಸ್ವಾರ್ಥತ್ಯಾಗದ ಅಗತ್ಯನೇ ಇಲ್ಲ....ಏನಂದಿ ?....( ನಕ್ಕು ) ಲೆಕ್ಚರ್ ಕೊಡ್ತೀನೆ ?.... ಹಹ !....ಅಹುದು ಮತ್ತೆ....ಇನ್ನು ನಾನು ನಿನ್ನ ಮುಂದ, ನೀನು ನನ್ನ ಮುಂದ ಲೆಕ್ಚರ್ ಕೊಡೋದು....ಅಂತೂ ಮಂದಿಗೆ ಒಮ್ಮೆ ನಮ್ಮ ಲೆಕ್ಚರ ತಪ್ಪಿಸಿಕೊಳ್ಳೋ ಸ್ವಾತಂತ್ರ್ಯ ಸಿಕ್ಕಿತು....ಏನಂದಿ ?... ಅದಕ್ಕೇ ನಾ ನಿನಗೆ ಹೇಳಿಲ್ಲೇನು ?....ದೇಶದ ಭವಿತವ್ಯ ನಿರ್ಣಯ ಆಯ್ತು, ಇನ್ನು ಮ್ಯಾಲೆ ನಮ್ಮ ಭವಿತವ್ಯದ ನಿರ್ಣಯ ಮಾಡಿ-ಕೊಳ್ಳಲಿಕ್ಕೆ ಅಡ್ಡಿ ಇಲ್ಲ ಅಂತ ?....ಏನು ?....ತಪ್ಪು, ಮಿಸ್ ಮಂದಾಕಿನೀ, ನಿನ್ನ ಮಾತು ತಪ್ಪು ಅಂತ ನಾನು ಎಂದಿನಿಂದಲೂ ಹೇಳ್ತೀನಿ....ಈಗ ನಿನ್ನಂಥವರೇ ಮುಂದಾಳಾಗಬೇಕಾಗಿತ್ತು; 'ಆಗಿತ್ತು' ಯಾಕೆ ?—ಈಗ ಕೂಡ ನೀನೇ ಮುಂದಾಳು ಆಗ್ಬೇಕೂ ಅಂತ—ಛೆಛೆ ! ( ನಗೆಯಿಂದ ) ಪೇಪರಿನೊಳಗಿಂದ ಓದೋದಿಲ್ಲ ನಾನು—ನನ್ನ ವಿಚಾರ ಹೇಳ್ತೀನಿ....ಏನು ?....ಅಜ್ಞನವರ್ನ ಕೇಳ್ತೀಯಾ?...ಮಿಸ್ ಮಂದಾಕಿನೀ, ಈಗ ಹಿಂದುಸ್ತಾನದೊಳಗ— ಏನಂದಿ ?—ಆಗ್ಲಿ—'ಇಂಡಿಯಾ' ಅಂತೀನಿ—ಈಗ ಇಂಡಿಯಾ ದೊಳಗೆ ವ್ಯಕ್ತಿಸ್ವಾತಂತ್ರ್ಯ, ಪ್ರಜಾಪ್ರಭುತ್ವ—ಇವುಗಳ ರಾಜ್ಯ....



ಮನೇವಳಗ ಅಜ್ಜನ್ನಲ್ಲ, ತನ್ನ ಮನಸ್ಸನ್ನ ಕೇಳೋದು....ಹೊರಗ ತನ್ನ ಮನಸ್ಸನ್ನಲ್ಲ, ಬಹುಜನ ಸಮಾಜದ ಮನಸ್ಸನ್ನ ಕೇಳೋದು....ಆ ಲೆಕ್ಕದಿಂದ ನೀನು ಮುಂದಾಳಾಗ್ಬೇಕೂ ಅಂತ— ಏನಂದೆ ?—ನಾನು ಮಂದಿಯುವತಿಯಿಂದ ಡೆಪ್ಯುಟೇಶನ್ ತಂದೀ- ನೇನು ಅಂತ ಕೇಳ್ತೀಯಾ ?....ಏನಂತೀ ? ವ್ಯಕ್ತಿಸ್ವಾತಂತ್ರ್ಯ ನಾನೇ ಒಪ್ಪಿಕೊಳ್ಳೋದಿಲ್ಲ ?....ಶಕ್ಯನೆ ಇಲ್ಲ....ವ್ಯಕ್ತಿಸ್ವಾತಂತ್ರ್ಯಕ್ಕ ನಾನು ಎಂದಿನಿಂದಲೂ ಮನ್ನಣೆ ಕೊಡ್ತೀನಿ ... (ನಗೆಯಿಂದ) ವ್ಯಕ್ತಿಸ್ವಾತಂತ್ರ್ಯ ಅಂದ್ರ—ವ್ಯಕ್ತಿಸ್ವಾತಂತ್ರ್ಯ ; ಅದರಲ್ಲಿ ನನ್ನೂ ನಿನ್ನೂ ಅಂತ ಭೇದ ಇಲ್ಲ....ಹಹ!....ಇದೊಳ್ಳೇ ಮಾತು, "ಗಂಡಸಿಗೆ ತನ್ನ ಹೊರತು ಇನ್ನೊಬ್ಬರು ಇದ್ದಾರ ಅನ್ನೋದು ಲಕ್ಷ್ಯಕ್ಕೇ ಬರೋದಿಲ್ಲ" ಅಂತ !....ಎಲೆ—ಎಲೆ—ಏನು 'ಭಲೆ' ಅನ್ನಲ್ಯಾ— ಜಾತಿಜಗಳ ಸಾಕಾಗಿಲ್ಲೇನು ? ಇನ್ನು ಗಂಡಸು—ಹೆಂಗಸು ಅಂತ ಜಗಳ ಹೂಡೋದೇನು ?

["ಯಾಕ ಹೂಡ್ಬಾರ್ದು ಅಂತೀನಿ" ಎನ್ನುತ್ತ ಮಂದಾಕಿನಿ ಬರುವಳು. ತಲೆ ಗೂದಲನ್ನು ಅಂದವಾಗಿ ಬಾಚಿಕೊಂಡಿದ್ದಾಳೆ. ಉಟ್ಟ ಸೀರೆಯನ್ನು ಬದಲಾಯಿಸಿ ದ್ದಾಳೆ. ಮುಖದಲ್ಲಿ ದಣಿವಿನ ಕಳೆ ಕಳೆದು ಅಂದ ಕಳ ಹೆಚ್ಚುವಂತೆ ಓರಣಗೊಂಡಿ ದ್ದಾಳೆ. ಅವಳು ಬಂದೊಡನೆ ಒಂದೆರಡು ನಿಮಿಷ ಸುಬ್ಬಣ್ಣನು ಸಾಕಾಂಕ್ಷ ದೃಷ್ಟಿ ಯಿಂದ ಅವಳನ್ನು ದಿಟ್ಟಿಸುತ್ತಲಿದ್ದಾನೆ.]

**ಮಂದಾಕಿನಿ:**—(ಕುರ್ಚಿಯ ಹತ್ತಿರ ನಡೆದು ಬರುತ್ತ) ಯಾಕ ಹೂಡ್ಬಾರದು ಅಂತೀನಿ ? ಇಷ್ಟು ದಿವಸ ಬ್ರಿಟಿಶರ ಕೂಡ ಹೊರ ಜಗಳಕ್ಕ ಗಂಡಸು ಹೆಂಗಸು ಒಂದಾದರು....ಇನ್ನು ಮ್ಯಾಲೆ—(ಸುಬ್ಬಣ್ಣನು ಒಂದೇ ಸಮನೆ ತನ್ನನ್ನು ದಿಟ್ಟಿಸುತ್ತಿದ್ದುದು ಲಕ್ಷ್ಯಕ್ಕೆ ಬಂದು) ನನ್ನ ಮಾತಿನ ಕಡೆ ಲಕ್ಷ್ಯ ಅದ ಏನು ನಿಮ್ದು ?

**ಸುಬ್ಬಣ್ಣ :**— ಉಡೋ ಸೀರೆ ಬದಲಾದ್ಮೇಲೆ ನೋಡೊ ಕಣ್ಣೇ ಬದಲಾಗ್ತಾವ ಅಂತ—

[ಇಬ್ಬರೂ ನಗುವರು]

**ಮಂದಾಕಿನಿ :**— (ಅನಿವಾರ್ಯವಾಗಿ ಬಂದ ನಾಚಿಕೆಯನ್ನು ತಡೆಯುತ್ತ) ಅಜ್ಜ ತಂದ ಸೀರೆ. ತಂದಾಗಿನಿಂದ ಉಟ್ಟುಕೊಳ್ಳೋದೇ ಆಗಿದ್ದಿಲ್ಲ....

ಅಜ್ಜ ಒಂದೇ ಸವನೆ ಬೆನ್ನು ಹತ್ತಿದ್ದ, " ಅವನ್ನುಟ್ಟುಕೋ, ಕಣ್ಣಾರೆ ನೋಡ್ತೀನಿ " ಅಂತ....ಅದಕ್ಕ—ಹಟದಿಂದ—ಈ ದಿವಸ—

**ಸುಬ್ಬಣ್ಣ** :— ( ನಡುವೆಯು ) ಅಜ್ಜನವರ ಆಜ್ಞಾಪತ್ರ ಹೊರಟಿದೆ ಅಂದವ್ಯಾಲೆ—

**ಮಂದಾಕಿನಿ** :—( ನಗೆಯಿಂದ ) ಇಷ್ಟು ಯಾಕೆ ನಿರಾಶೆಯಿಂದ ಮಾತಾಡ್ತೀರಿ ? ನಿಮಗ ಯಾರು ನೋಡ್ಲಿಕ್ಕೆ ಬ್ಯಾಡ ಅಂದಿಲ್ಲ.... ( ಪಾವಟಿಗೆಯ ಮೇಲೆ ಸಪ್ಪಳಾಗುವುದನ್ನು ಕೇಳಿದಂತೆ ಮಾಡಿ) ಚಹ ಬಾತು ಕಾಣಿಸ್ತದ....

**ಸುಬ್ಬಣ್ಣ** :— ಹಾಗ ಕೇಳಿದರ ಇದು ಚಹದ ವ್ಯಾಳೇನೇ ಅಲ್ಲ—

**ಮಂದಾಕಿನಿ** :— ಒಳ್ಳೇ ಕೆಲಸಕ್ಕ ಯಾವಾಗಲೂ ಮುಹೂರ್ತ. ( ಅನಂತ ಬರುವನು. ಮೇಜಿನ ಮೇಲೆ ಟ್ರೇ—ಅದರಲ್ಲಿ ಎರಡು ಕಪ್-ಸಾಸರುಗಳು, ಹಾಲು, ಸಕ್ಕರೆ, ಸ್ಟ್ರೇನರ್ ಮತ್ತು ಕೆಟಲ್.. ಇಟ್ಟು ತಡೆಯುವನು ) ನೀ ಹೋಗು, ಅನಂತಾ....ನಾವೇ ಹಾಕಿಕೊಳ್ಳತೀವಿ. (ಅನಂತನು ಹೋಗುವನು. ಮಂದಾಕಿನಿ ಇನ್ನೊಂದು ಕುರ್ಚಿಯಲ್ಲಿ ಕೂಡುವಳು )

[ ಮುಂದಿನ ಮಾತುಗಳು ನಡೆದಾಗ ಮೊದಲು ಮಂದಾಕಿನಿ ಚಹವನ್ನು ಕಪ್ಪಿನಲ್ಲಿ ಹಾಕಿ ಸುಬ್ಬಣ್ಣನಿಗೆ ಕೊಡುವಳು, ಆಮೇಲೆ ತಾನು ತೆಗೆದುಕೊಳ್ಳುವಳು. ಇಬ್ಬರೂ ಚಹ ಕುಡಿಯುತ್ತಿರುವರು. ]

**ಮಂದಾಕಿನಿ** :— ಇನ್ನೊಂದು ಕುರ್ಚಿ ಅಜ್ಜ ಕೆಳಗ ತರಿಸಿಕೊಂಡ.

**ಸುಬ್ಬಣ್ಣ** :— ( ವಿಚಾರ ಮಾಡುವವನಂತೆ ನಟಿಸಿ) ನಂ ಡೆಪ್ಯುಟೇಶನ್ ಅಜ್ಜ ಅವರ ಕಡೀನೆ ಒಯ್ಯದ ಹೊರತು ಸಮಾಧಾನದ ಉತ್ತರ ಸಿಗೋದಿಲ್ಲ ಅಂತ ಕಾಣ್ತದ....

**ಮಂದಾಕಿನಿ** :— ( ಚಕಿತಳಾಗಿ) ಯಾವ ಡೆಪ್ಯುಟೇಶನ್ ?

**ಸುಬ್ಬಣ್ಣ** :— ( ನಗೆಯಿಂದ ) ಇದೇ ಈಗ ನೀನೇ ಹೇಳಿದೆಯಲ್ಲ, ನಾನು ಡೆಪ್ಯುಟೇಶನ್ ತಂದೀನಿ ಅಂತ ?....ನಿನ್ನಿಂದ ಉತ್ತರ ದೊರೆಯಲಿಲ್ಲ, ಆದಕ್ಕ ಅವರ್ನೆ ಕೇಳ್ತೀನಿ—

**ಮಂದಾಕಿನಿ** :—( ನಡುವೆಯೆ ) ನಿಂ ಮೊಮ್ಮಗಳ್ನ ಮುಂದಾಳು ಮಾಡಿರಿ—ಅಂತ ? ( ಸುಬ್ಬಣ್ಣನು ತಲೆತೂಗುವನು ) ಹೆಂಗಸು ಮುಂದಾಳಾಗೋವಷ್ಟು ನಮ್ಮ ಗಂಡಸರು ಸುಧಾರಿಸಿಯಾರೇನು ?

**ಸುಬ್ಬಣ್ಣ** :— ಓಹ್—( ಒಮ್ಮೆಲೆ ತಡೆದು ಚಕಿತನಾಗಿ ) ಏನು ? ಏನಂದೆ ?

**ಮಂದಾಕಿನಿ** :— ( ನಕ್ಕು ) ರಾಜಕಾರಣಿ ಇದ್ದವರಿಗೆ ಬ್ಯಾಡಾದ್ದು ಕೇಳಿ-ಸೋದೇ ಇಲ್ಲ. ಅಲ್ಲೇನು ?

**ಸುಬ್ಬಣ್ಣ** :— ( ಮೇಲಿನಂತೆ ) ಕೇಳಿಸಿತು. ಆದ್ರೆ ನಿನ್ನ ಬಾಯಿಯಿಂದ್ಲೆ ಈ ಮಾತು ಬಂದಿತು ಅಂತ ವಿಶ್ವಾಸ ಕೂಡಲೊಲ್ಲದು.

**ಮಂದಾಕಿನಿ**:— ( ಕೆಣಕುವವಳಂತೆ ) ಅದ್ಯಾಕೊ ? ಹೆಂಗ್ಸಿಗೆ ಸ್ವಾತಂತ್ರ್ಯ ಇಲ್ಲೇನು—ಇಂಥಾ ಮಾತು ಆಡ್ಲಿಕ್ಕೆ ?

**ಸುಬ್ಬಣ್ಣ** :— ( ಇನ್ನೂ ಚಕಿತನಾಗಿಯೆ) ಅಲ್ಲ—ಆ ಮಾತಿನ ಅರ್ಥ ಏನೂ ಅಂತ—

**ಮಂದಾಕಿನಿ** :— ಯಾಕೆ ? ಇದೇ ಈಗ ನೀವೇ ಕೇಳಲಿಲ್ಲೇನು—ಇನ್ನು ಗಂಡಸು–ಹೆಂಗಸು ಜಗಳ ಹೂಡೋದೇನು—ಅಂತ....

**ಸುಬ್ಬಣ್ಣ** :—( ಉಸುರ್ಗರೆದು ) ಓಹೋ ! ಅದು ? ( ನಗೆಯಿಂದ ) ಅದು–ಹೆಹೆ—ನಾನು ವಿನೋದಕ್ಕ ಅಂತ ಮಾತಾಡಿದ್ದು.

**ಮಂದಾಕಿನಿ** :— (ತುಸು ಬಿರುಸಾಗಿ) ಆದ್ರೆ—ನನಗ ಆ ಮಾತು ವಿನೋದ ಅನಿಸೋದಿಲ್ಲ—ಅನಿಸೋದಿಲ್ಲ ಅಂದೆ.

**ಸುಬ್ಬಣ್ಣ** :— ( ಅವಳ ದನಿಗಾಗಿ ಬೆರಗಾಗಿ ) ಏನಂದೆ ?

**ಮಂದಾಕಿನಿ** :— ( ಸಿಡುಕಿನ ದನಿಯಲ್ಲಿ) " ಏನಂದೆ–ಏನಂದೆ " ! ಮಾತು ಮೈಮ್ಯಾಲೆ ಬಂದ್ರೆ ಕೈ ಕಿವಿಯಮ್ಯಾಲೆ !....ವ್ಯಕ್ತಿಸ್ವಾತಂತ್ರ್ಯ— ಆ ಸ್ವಾತಂತ್ರ್ಯ–ಈ ಸ್ವಾತಂತ್ರ್ಯ ಅಂದಿರೆಲ್ಲ ನೀವು—ನಾನು ಕೇಳೋದು ಆ ಸ್ವಾತಂತ್ರ್ಯ ಯಾರಿಗೆ ಸಿಕ್ಕಿತೂ ಅಂತ....

**ಸುಬ್ಬಣ್ಣ** :— ( ಚಹ ಕುಡಿಯುವುದನ್ನು ಮುಗಿಸಿ, ಏಳುತ್ತ ) ಮಿಸ್ ಮಂದಾಕಿನೀ, ನಿನ್ನ ಮಾತಿನ ಅರ್ಥ ಈಗ ತಿಳೀತು....ಆದ್ರೆ ಮತ್ತೆ ಯಾರಾದರೂ ಈ ಮಾತು ಆಡಿದ್ರೆ—( ಬೆನ್ನಿಗೆ ಕೈಕಟ್ಟಿಕೊಂಡು ಎಡ ಬದಿಯ ಕಪಾಟದವರೆಗೆ ನಡೆದು ವಾಕ್ಯವನ್ನು ಮುಗಿಸದೆ ಆ ಕಪಾಟದಲ್ಲಿ ಏನನ್ನೊ ದಿಟ್ಟಿಸುತ್ತ ನಿಲ್ಲುವನು. ಮಂದಾಕಿನಿಯೂ ಅವನನ್ನೆ ದಿಟ್ಟಿಸು-ತ್ತಿರುವಳು. ಒಂದೆರಡು ನಿಮಿಷಗಳಲ್ಲಿ ' ಹಂ ' ಎಂದು ಉಸಿರೆಳೆದು ತಟ್ಟನೆ ತಿರುಗಿ ನಿಂತು ಮಂದಾಕಿನಿಯನ್ನು ಇದಿರಿಸಿ ) ಮತ್ತೆ ಯಾರಾದರೂ ಈ ಮಾತು ಆಡಿದ್ರೆ, ನಾನು ವಿಚಾರ ಕೂಡಾ ಮಾಡ್ತಿದ್ದಿಲ್ಲ ಅಂದೆ....

**ಮಂದಾಕಿನಿ** :— ಅಂದ್ರೆ ಈಗ ನೀವು ವಿಚಾರ ಮಾಡಿದ್ರೆ ಅದು ನನ್ನ ಮ್ಯಾಲೆ ವೈಯಕ್ತಿಕ ಉಪಕಾರ ಅನ್ನಿರಿ. ( ತಿರಸ್ಕಾರದಿಂದ ತುಟಿ ಬಿರಿಯುವುವು )

**ಸುಬ್ಬಣ್ಣ** :— ಉಪಕಾರ ಬ್ಯಾಡ, ಉಪಚಾರ ಬ್ಯಾಡ, ಮಿಸ್ ಮಂದಾಕಿನೀ. ಆದ್ರೆ ಸ್ವಾತಂತ್ರ್ಯಯುದ್ಧದೊಳಗೆ ಗಂಡಸಿನ ಭುಜಕ್ಕೆ ಭುಜ ಹಚ್ಚಿ ಹೋರಾಡಿದ ಹೆಂಗಸಿನ ಬಗ್ಗೆ ಯಾರಿಗೆ ಆದರ ಇಲ್ಲ ?

**ಮಂದಾಕಿನಿ** :— ( ತುಸು ಒಗರಾಗಿ ) ಅದನ್ನೆ ಹೇಳ್ತೀನಿ ನಾನು. ಸ್ವಾತಂತ್ರ್ಯ ಯುದ್ಧದೊಳಗ ಗಂಡಸಿನ ಭುಜಕ್ಕೆ ಭುಜ ಹಚ್ಚಿ ಹೋರಾಡಿದಳು ಹೆಂಗಸು. ಈಗ ಸ್ವಾತಂತ್ರ್ಯ ಸಿಕ್ಕಿತು—ಅದಕ್ಕ ಮತ್ತೆ ಹೆಂಗಸು ಭುಜಕ್ಕೆ ಭುಜ ಹಚ್ಚಿ ಗಂಡಸಿಗೆ ಎಡಚಾಗದೆ ಹೆಜ್ಜೇವಳಗ ಹೆಜ್ಜೆ ಇಟ್ಟು ಹಿಂಬಾಲಿಸಬೇಕು ಗಂಡಸಿನ್ನ. ಅಹುದಲ್ಲೊ ?

**ಸುಬ್ಬಣ್ಣ** :— ( ಪೋಳ್ಳು ನಗೆಯಿಂದ ) ನನ್ನದಂತೂ ಆ ಅಭಿಪ್ರಾಯ ಇಲ್ಲ.

**ಮಂದಾಕಿನಿ** :— ( ಚಕಿತಳಾದಂತೆ ) ಆ ಅಭಿಪ್ರಾಯ ಇಲ್ಲ ?....ಅಂದ್ರೆ— ಅಂದ್ರೆ ದಿನಾಲು ನೀವು ನನಗ ಬರೆದು ಬೇಡಿ, ಮಾತಾಡಿ ಕಾಡಿ ಕೇಳತಿರೋ ವಿಷಯ ಏನು ಹಾಗಾದ್ರೆ ?

**ಸುಬ್ಬಣ್ಣ** :— ( ದಂಗುಪಡೆದಂತೆ ) ಮಂದಾಕಿನೀ—ಆ ವಿಷಯ—( ಒಂದು ನಿಮಿಷ ಮಾತು ಸಾಲದೆ ನಿಲ್ಲುವನು. ಮಂದಾಕಿನಿ ಮಾತ್ರ " ಏನು " ಎಂದು ಹಟದಿಂದ ಕೇಳುವವರಂತೆ ಅವನನ್ನು ದಿಟ್ಟಿಸುವಳು. ಕೊನೆಗೆ ಕೆಳಗೆ ನೋಡುತ್ತ) ಅದು ರಾಜಕಾರಣದ ಮಾತಲ್ಲ, ಅಂತಃಕರಣದ ಮಾತು. ( ಕೆಳಗೆ ನೋಡುತ್ತಲೆ ನಿಲ್ಲುವನು )

[ ಇಬ್ಬರಿಗೂ ಕೆಲಹೊತ್ತು ಏನು ಮಾತನಾಡಬೇಕೆಂಬುದು ತಿಳಿಯುವುದಿಲ್ಲ. ಕೊನೆಗೆ ಮಂದಾಕಿನಿಯೂ ಕೆಳಗೆ ಮುಖ ಮಾಡಿ ಕುಳಿತುಕೊಳ್ಳುವಳು. ]

**ಸುಬ್ಬಣ್ಣ** :— ( ಆಕೆ ಹಾಗೆ ಕೂತುದನ್ನು ನೋಡಿ ಕಳಕಳಿಯಿಂದ ) ಮಿಸ್ ಮಂದಾಕಿನೀ, ಅದಕ್ಕೂ ರಾಜಕಾರಣಕ್ಕೂ ಏನೂ ಸಂಬಂಧ ಇಲ್ಲ, ಅದು ಅಂತಃಕರಣದ ವಿಷಯ, ನಾನು ಹೇಳಿದ್ಹಾಂಗ. ( ಮಂದಾಕಿನಿ ಮತ್ತೆ ತನ್ನನ್ನು ದಿಟ್ಟಿಸುವುದನ್ನು ಕಂಡು ) ಅದರಲ್ಲಿ ನನ್ನ ತಪ್ಪು

ಇಲ್ಲ, ನಿನ್ನದಂತೂ ತಪ್ಪು ಅನ್ನೋದು ಇಲ್ಲೇ ಇಲ್ಲ. ಹಾಗ ಕೇಳಿದರ ಯಾರದೂ ತಪ್ಪಿಲ್ಲ....(ಎರಡು ಹೆಜ್ಜೆ ಮುಂದೆ ನಡೆದು ಬಂದ) ನಾನು ಈ ಊರಿಗೆ ಬಂದಂದಿನಿಂದ ನಮ್ಮಿಬ್ಬರದೂ ಒಂದೇ ಕೆಲಸ ಆದ್ದರಿಂದ, ಕೂಡಿರೋ ಸಂದರ್ಭ ಬಂದಿತು, ಸಹವಾಸ ಫಲಿಸಿತು, ಪರಿಚಯ ಹೆಚ್ಚಿತು, ಮತ್ತೂ–ಮತ್ತೂ–ನಿನ್ನ ಯೋಗ್ಯತೆಗಾಗಿ ಮೊದಲು ಆದರ, ಆಮ್ಯಾಲೆ ಅಭಿಮಾನ, ಕೊನೆಗೆ–ಕೊನೆಗೆ (ಶೂನ್ಯ ದೃಷ್ಟಿಯಿಂದ ನೋಡುತ್ತ) ಪ್ರೇಮ ನನ್ನ ಅಂತಃಕರಣದಲ್ಲಿ ಮೂಡಿತು. (ಮಂದಾಕಿನಿ ಮತ್ತೆ ಕೆಳಗೆ ನೋಡುವಳು, ಅದ್ದರಿಂದ ತಾನು ಆಕೆಯ ಕಡೆಗೆ ಮುಖ ತಿರುವಿ) ಮಂದಾಕಿ–– (ಸುಧಾರಿಸಿಕೊಂಡು) ಮಿಸ್ ಮಂದಾಕಿನೀ, ಅಂದಿನ ದೇಶದ ಪರಿಸ್ಥಿತಿಯೊಳಗ ಆ ಪ್ರೇಮ ಹತ್ತಿಕ್ಕಿದೆ; ಈಗ ದೇಶದ ಸ್ವಾತಂತ್ರ್ಯಯುದ್ಧ ಮುಗಿಯಿತು (ಮಂದಾಕಿನಿ ತಟ್ಟನೆ ಮುಖವನ್ನೆತ್ತಿ ನೋಡಲು) ಮುಗಿಯಿತು— ಮುಗಿಯ್–(ಎಂದು ಮಾತು ಮುಂದರಿಸಲಾರದೆ ತಡೆಯುವನು)

**ಮಂದಾಕಿನಿ** :–– (ತನ್ನಷ್ಟಕ್ಕೆ ಎಂಬಂತೆ) ಸ್ವಾತಂತ್ರ್ಯಯುದ್ಧ ಮುಗಿಯಿತು–?–?

**ಸುಬ್ಬಣ್ಣ** :––– (ಒಮ್ಮೆಲೆ ಧೈರ್ಯ ಬಂದಂತಾಗಿ) ಅಲ್ಲವೆ, ಮಿಸ್ ಮಂದಾಕಿನಿ ? ಅದಕ್ಕೇ ಹೇಳೋದು ಇನ್ನು ಯಾಕೆ ಸ್ವಾರ್ಥತ್ಯಾಗ ಮಾಡೋದು ಅಂತ ?

**ಮಂದಾಕಿನಿ** :–– (ಮೇಲಿನಂತೆ) ಸ್ವಾರ್ಥತ್ಯಾಗ ?

**ಸುಬ್ಬಣ್ಣ** :–– (ಮತ್ತೆ ಅಧೈರ್ಯದಿಂದ) ಅಲ್ಲವೆ ? ಅಲ್ಲವೆ, ಮಿಸ್ ಮಂದಾಕಿನಿ ? ಇನ್ನು ಯಾಕೆ ಮದುವೆ ಮಾಡಿಕೊಳ್ಳಲಾರದೆ ಹಾಗೇ ಇರೋದು ಅಂತ ?

**ಮಂದಾಕಿನಿ** :— (ಸುಮ್ಮನಿರುವಳು)

**ಸುಬ್ಬಣ್ಣ** :–– (ನಿರಾಶೆಯ ದನಿಯಲ್ಲಿ) ನನ್ನ ಮಾತಿಗೆ ನಿನ್ನ ಒಪ್ಪಿಗೆ ಇದೆ ಅಲ್ಲವೆ ?

**ಮಂದಾಕಿನಿ** :–– (ವಿಚಾರಗಳನ್ನು ಅರಗಿಸಿಕೊಳ್ಳುವವಳಂತೆ) ಸ್ವಾತಂತ್ರ್ಯ ಯುದ್ಧ ಮುಗಿಯಿತು !....ಸ್ವಾರ್ಥತ್ಯಾಗದ ಅಗತ್ಯ ಇನ್ನು ಇಲ್ಲ !....

ಒಪ್ಪಿಗೆ—ನಿಮ್ಮ ಮಾತಿಗೆ ಒಪ್ಪಿಗೆ (ಇದು ಒಪ್ಪಿಗೆಯೆಂದೇ ತಿಳಿದು ಆಶೆಯಿಂದ ಮುಂದೆ ಬಂದ ಸುಬ್ಬಣ್ಣನನ್ನು ಒಮ್ಮೆಲೆ ದಿಟ್ಟಿಸಿ) ಯಾವ ಮಾತಿಗೆ ಒಪ್ಪಿಗೆ?....(ಸುಬ್ಬಣ್ಣ ಗಾಬರಿಗೊಂಡಂತೆ ಹಿಂಜರಿಯು-) ಊರಿಗೆ ಮುಂದಾಳು ಆಗಬೇಕು—ಎಂಬ ಮಾತಿಗೊ? ಇಲ್ಲ, ಮದಿವೆ ಆಡಿಯಾಳಾಗಬೇಕು—ಎಂಬ ಮಾತಿಗೊ? (ಸುಬ್ಬಣ್ಣನು ಏನೂ ಮಾತನಾಡದೆ ತಿರುಗಿ ನಿಂತು ಮೆಲ್ಲಗೆ ಮತ್ತೆ ಕಪಾಟದ ಕಡೆಗೆ ನಡೆಯುವನು) ಯಾಕೆ? (ಏಳುತ್ತ) ಯಾವ ಮಾತಿಗೆ ಅನ್ನೋದನ್ನ—(ತಡೆದು) ಸ್ವಾರ್ಥತ್ಯಾಗದ ಆಗತ್ಯ ಇಲ್ಲ ಅಂದಮ್ಯಾಲೆ ಮುಂದಾಳು ಆಗ್ಬೇಕು ಅಂತೇ ಅರ್ಥ ಅಲ್ಲ? (ಮುಗುಳ್ನಗೆ)

**ಸುಬ್ಬಣ್ಣ** :— (ನಿಂತಲ್ಲಿಯೆ, ಆಕೆಯ ಕಡೆಗೆ ನೋಡದೆ) ನನ್ನ ಅಭಿಪ್ರಾಯ ಸ್ಪಷ್ಟ ಆಗಿಲ್ಲ ಅನ್ನೋದು ನನ್ನದೇ ತಪ್ಪು....ಮುಂದಾಳು ಆಗ್ಬೇಕು ನೀನು, ಅಂದೆ....ನಿಜ....

**ಮಂದಾಕಿನಿ** :— ಆದ್ರೆ ಇನ್ನೂ ಒಂದು ಮಾತೂ ಹೇಳಿದ್ದಿರಿ—

**ಸುಬ್ಬಣ್ಣ** :— ಆ ಮಾತು ಹೇಳಿದ್ದು ತಪ್ಪಾಯಿತೇನೊ!... (ಒಮ್ಮೆಲೆ ತಿರುಗಿ ನಿಂತು) ಆದ್ರೆ, ಮಿಸ್ ಮಂದಾಕಿನೀ, ಆ ಮಾತು ನನಗ ಅನಿವಾರ್ಯ ಆಯ್ತು—

**ಮಂದಾಕಿನಿ** :— ಅದ್ಕೇ ಕೇಳಿದೆ, ಎರಡರಲ್ಲಿ ಯಾವ ಮಾತಿಗೆ ನನ್ನ ಒಪ್ಪಿಗೆ ಬೇಕು—ಅಂತ.

**ಸುಬ್ಬಣ್ಣ** :— (ಆಧೈರ್ಯದಿಂದ) ಎರಡೂ ಮಾತುಗಳಿಗೂ ಒಂದೇ ಉತ್ತರ ಕೊಡಬಹುದಲ್ಲ? (ಮಂದಾಕಿನಿಯು 'ಇಲ್ಲ' ಎಂದು ತಲೆ ಅಲ್ಲಾಡಿಸಲು) ಮಿಸ್ ಮಂದಾಕಿನೀ, ಎರಡನ್ನೂ ಕೂಡಿಯೆ ನಡೆಸ ಬಹುದು ಅಂತ ನನಗ—ಅಲ್ಲ—ನಿನಗ ಅನ್ನಿಸೋದಿಲ್ಲ?

**ಮಂದಾಕಿನಿ** :— (ನಕ್ಕು) ಮುಂದಾಳಾಗೋದು—ಮದುವೆ ಆಗೋದು: ಎರಡನ್ನೂ ಕೂಡಿ ನಡೆಸೋದು ಹ್ಯಾಗೆ ಶಕ್ಯ? ಒಂದಕ್ಕ ಬೇಕು ಪೂರ್ತಿ ಸ್ವಾರ್ಥತ್ಯಾಗ, ಇನ್ನೊಂದು ಪೂರ್ತಿ ಸ್ವಾರ್ಥದ ಭೋಗ—

**ಸುಬ್ಬಣ್ಣ** :— (ಕಳಕಳಿಯಿಂದ ಅವಳ ಕಡೆಗೆ ನಡೆದುಬರುತ್ತ) ಅಲ್ಲ—ಅಲ್ಲ— ಮಿಸ್ ಮಂದಾಕಿನೀ, ಮದುವೆ ಅಂದ್ರೆ ಸ್ವಾರ್ಥದ ಭೋಗ ಅಲ್ಲ—

**ಮಂದಾಕಿನಿ :—** ( ಒಮ್ಮೆಲೆ ಗಟ್ಟಿಯಾಗಿ ನಕ್ಕು) ಮದುವೆ ಅಂದ್ರೆ ಸ್ವಾರ್ಥದ ಭೋಗ ಅಂತ ನಾನಾದ್ರೂ ಎಲ್ಲಿ ಹೇಳ್ತೀನಿ ? ಮುಂದಾಳು ಅಂದೆ ಪೂರ್ತಿ·ಸ್ವಾರ್ಥದ ಭೋಗ–(ಸುಬ್ಬಣ್ಣನು ಪೆಚ್ಚುಕಳೆಯಿಂದ ನೋಡಲು) ಮುಂದಾಳು ಅಂದ್ರೆ ಸ್ವಾರ್ಥದ ಭೋಗ, ಮದುವೆ ಅಂದ್ರೆ ಪೂರ್ತಿ ಸ್ವಾರ್ಥತ್ಯಾಗ ! ( ಈ ಮಾತನ್ನು ಕೇಳಿ ಸುಬ್ಬಣ್ಣನು ನಿಂತಲ್ಲಿಯೆ ನಿಶ್ಪ್ರಾಣನಾದಂತೆ ಕುರ್ಚಿಯಲ್ಲಿ ಕುಕ್ಕರಿಸುವನು ) ಮದುವೆ ಅಂದ್ರೆ ಹೆಂಗಸಿಗೆ ಪೂರ್ತಿ ಸ್ವಾರ್ಥತ್ಯಾಗ !....ಅದಕ್ಕೇ ಹೇಳಿದೆನಲ್ಲ ನಿಮಗೆ, " ಗಂಡಸಿಗೆ ತನ್ನ ಹೊರತು ಇನ್ನೊಬ್ಬರು ಇದ್ದಾರೆ ಅನ್ನೋದು ಲಕ್ಷ್ಯಕ್ಕೇ ಬರೋದಿಲ್ಲ" ಅಂತ ?....(ಪಟಪ ದನಿಯಲ್ಲಿ) ಮದುವೆ ಅಂದ್ರೆ—ಹೆಂಗಸಿಗೆ—ಪೂರ್ತಿ ಸ್ವಾರ್ಥತ್ಯಾಗ ; ಮುಂದಾಳಾಗೋದು ಅಂದ್ರೆ—ಗಂಡಸಿಗೆ ಪೂರ್ತಿ ಸ್ವಾರ್ಥದ ಭೋಗ. [ ಚಹದ ಕಪ್-ಸಾಸರುಗಳನ್ನು ಸಾವರಿಸುತ್ತ ಪ್ರೀಪಲ್ಲಿ ಸರಿಯಾಗಿ ಇಡುತ್ತಿರುವಳು ]

**ಸುಬ್ಬಣ್ಣ :—** ( ತುಸು ಧೈರ್ಯ ತಂದುಕೊಂಡು) ನಾನು ಒಪ್ತೀನಿ. ಮದುವೆ ಅಂದ್ರೆ ಸ್ವಾರ್ಥತ್ಯಾಗ, ಆದ್ರೆ ಗಂಡಸಿಗೂ ಹೆಂಗಸಿಗೂ ಇಬ್ಬರಿಗೂ ಸ್ವಾರ್ಥತ್ಯಾಗ—

**ಮಂದಾಕಿನಿ :—** ( ನಡುವೆಯೆ ) ಅಲ್ಲ ; ಮದುವೆ ಮಾಡಿಕೊಂಡೂ ಸ್ವಾರ್ಥ ಆಕಾಂಕ್ಷೆ ಸಾಧಿಸಿಕೊಂಡ ಗಂಡಸರು ಅನೇಕರಿದ್ದಾರೆ, ಆದ್ರೆ ಹೆಂಗಸಿಗೆ ಮಾತ್ರ ಮದುವೆ ಅಂದ್ರೆ ಎಲ್ಲ ಆಶೆ–ಆಕಾಂಕ್ಷೆಗಳ ಸಮಾಧಿ.

**ಸುಬ್ಬಣ್ಣ :—** (ಹಿರಿತನದ ನಗೆಯಿಂದ) ಒಂದು ಕುಟುಂಬದ ಸರ್ವಾಧಿಕಾರಿಯಾಗುವ ಯೋಗ್ಯತಾ ಮದುವೆಯಿಂದಲೆ ಹೆಂಗಸಿಗೆ ಬರುವಾಗ—

**ಮಂದಾಕಿನಿ :—** ( ನಡುವೆಯೆ, ಸಿಡುಕಿನ ದನಿಯಲ್ಲಿ ) ಅದೇ ಅದೇ ಅದೇ.... ಯಾವ ಬಣ್ಣದ ಮಾತುಗಳಿಂದ ಹೇಳಿದರೂ ಒಂದು ಕುಟುಂಬ, ಒಂದು ಮನೆ, ನಾಲ್ಕು ಗೋಡೆಗಳ ನಡುವಿನ ನಾಲ್ಕು ಮೊಳ ಜಾಗ–ಇಡಿಷ್ಟೆ ಹೆಂಗಸಿನ ರಾಜ್ಯ ಅಹುದಲ್ಲ ? ಮೊದಲು ಮನೆ, ಮಕ್ಕಳು ; ಆಮ್ಯಾಲೆ—

**ಸುಬ್ಬಣ್ಣ :—** ( ಚಕಿತನಾಗಿ ) ಅಲ್ಲ–ಅದು–ಅದು ಅಂದರೆ ಒಂದು ನಿಸರ್ಗದ ನಿಯಮ, ಹೆಂಗಸಿನ ಜನ್ಮಸಿದ್ಧ ಹಕ್ಕು—

**ಮಂದಾಕಿನಿ :**— ( ತಿರಸ್ಕಾರದಿಂದ) ಇಷ್ಟು ದಿವಸ ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು ಅಂದಿರಿ, (ತಿರಸ್ಕಾರದ ಮುಗುಳ್ನಗೆಯಿಂದ) ಈಗ ಸ್ವರಾಜ್ಯ ಸಿಕ್ಕಿತು, ಇನ್ನು ಮದುವೆ ನಮ್ಮ ಜನ್ಮಸಿದ್ಧ ಹಕ್ಕು ಅಂತೀರೇನು ?

**ಸುಬ್ಬಣ್ಣ :**— ( ಕಂಗೆಟ್ಟ ಹುಡುಗನಂತೆ ) ಅಲ್ಲ, ಮಿಸ್ ಮಂದಾಕಿನೀ, ನೀ ಹೇಳೋದು ಒಂದುವ್ಯಾಳೆ ನಿಜ ಇದ್ದರೂ ನನ್ನದೇನು ತಪ್ಪು ಇದರಲ್ಲಿ ಅಂತ ನನ್ನ ಮ್ಯಾಲೆ ಸಿಟ್ಟಾಗುವೆ ?

**ಮಂದಾಕಿನಿ :**— ( ಮತ್ತೆ ಕೂಡುತ್ತ ) ನಿಮ್ಮ ಮ್ಯಾಲೆ ಸಿಟ್ಟಲ್ಲ, ನಿಮ್ಮ ಪ್ರಶ್ನೆಗೆ ಉತ್ತರ. ( ಸುಬ್ಬಣ್ಣನು ಏನೋ ಹೇಳಬೇಕೆನ್ನುವಷ್ಟರಲ್ಲಿ ) ಅನಂತಾ—( ಪಾವಟಿಗೆಯ ಕಡೆಗೆ ಮುಖ ತಿರುವಿ ) ಅನಂತಾ ಈ ಟ್ರೇ ಕೆಳಗೊಯ್ದು ಬಿಡು.

**ಸುಬ್ಬಣ್ಣ :**— ( ಏಳುತ್ತ ) ನಾನೂ ಹೊರಡತೀನಿ

[ ಮಂದಾಕಿನಿ ಮಾತನಾಡುವುದಿಲ್ಲ ]

ಅಜ್ಜನ್ನ—ಅಲ್ಲ—ಪಾಂಡಪ್ಪನವರ್ನ ಈಗೇ ಭೆಟ್ಟಿಯಾಗೇ ಹೋಗ್ತೀನಿ

[ ಮಂದಾಕಿನಿ ಮಾತನಾಡುವುದಿಲ್ಲ ]

[ ಅನಂತ ಬರುವನು. ಟ್ರೇ ತೆಗೆದುಕೊಂಡು ಹೊರಟು, ಏನೋ ಕೇಳಿಸಿದಂತಾಗಿ " ಏನು ? " ಎಂದು ತಿರುಗಿ ನಿಲ್ಲಲು ಮಂದಾಕಿನಿ ತಲೆ ಅಲ್ಲಾಡಿಸುವಳು. ಅವನು ಹೋಗುವನು ]

**ಸುಬ್ಬಣ್ಣ :**— ( ಒಂದು ಹೆಜ್ಜೆ ಹೊರಟು ) ನನ್ನಿಂದ ಏನಾದರೂ ಪ್ರಮಾದ ಆಗಿದ್ದರೆ ಕ್ಷಮಿಸಬೇಕು. (ಉತ್ತರವಿಲ್ಲದ್ದರಿಂದ ಮೆಲ್ಲಗೆ ಹೊರಡುವನು. ಪಾವಟಿಗೆಯ ಹತ್ತಿರ ತಿರುಗಿ ನಿಂತು ) ಎಲ್ಲಿ ಹೋದರೂ, ಏನು ಮಾಡಿದರೂ ನಿನ್ನಿಂದ್ಲೆ ಸ್ಫೂರ್ತಿ ನನಗ. ಅನುಗ್ರಹ ಇರಲಿ. ( ಎಂದವನೆ ಭರಭರ ಇಳಿದು ಹೋಗುವನು )

[ ಮಂದಾಕಿನಿ ಒಂದೆರಡು ನಿಮಿಷ ಹಾಗೆಯೇ ಕೆಳಗೆ ಮುಖ ಮಾಡಿಕೊಂಡೇ ಕುಳಿತಿದ್ದಾಳೆ. ಆಮೇಲೆ ಒಮ್ಮೆಲೆ ಮೇಜಿನ ಮೇಲೆ ಎರಡೂ ಕೈಗಳನ್ನಿಟ್ಟು, ಅವುಗಳಲ್ಲಿ ಮುಖವನ್ನು ಮುಚ್ಚುವಳು. ತಡೆದ ದುಃಖವು ಅವಳ ಮೈಯನ್ನೂ ಭುಜಗಳನ್ನೂ ನಡುಗಿಸುವುದು ಸ್ಪಷ್ಟವಾಗಿ ಕಾಣಿಸುವುದು. ಅವಳು ಹಾಗೇ ಒರಗಿದಾಗ ಸದ್ದಿಲ್ಲದೆ ಅಜ್ಜನು ಬಂದಿರುವನು ; ಬಂದು ಆಕೆಯನ್ನು ಹಾಗೆ ನೋಡಿ

ಅಲ್ಲಿಯೆ ತಡೆಯುವನು. ಇನ್ನು ಹೊರಡಬೇಕು ಎನ್ನುವಷ್ಟರಲ್ಲಿ, ಮಂದಾಕಿನಿ ಮೆಲ್ಲಗೆ ಮುಖವನ್ನೆತ್ತಿ ಅವನನ್ನು ನೋಡುವಳು. ಅವನೂ ತಡೆಯುವನು. ಇಬ್ಬರೂ ಒಬ್ಬರೊಬ್ಬರ ಕಡೆಗೆ ಧಾವಿಸುವವರಂತೆ—]

**ಮಂದಾಕಿನಿ :—** ಅಜ್ಜ ! [ ಏಳುವಳು ]

**ಅಜ್ಜ :—** ಮಂಡೂ (ಎನ್ನುತ್ತ ಅವಳ ಹತ್ತಿರ ಬಂದು) ಒಂದು ಕತೆ ನೆನಪಾಯ್ತು, ಹೇಳ್ಲಿಕ್ಕೆ ಅಂತ ಬಂದೆ.... ಹೇಳಲಿಯಾ ?....ಆಂ?.... ಕೇಳ್ತೀಯಾ ?....( ಮಂದಾಕಿನಿಯು ಮುಖ ತಿರುಗಿಸಿ ಕಣ್ಣೊರೆಸಿಕೊಳ್ಳು-ವಾಗ ) ಈ ಕತೆ ಕೇಳ್ಲಿಕ್ಕೆ ಬಹಳ ಅನುಕೂಲ ಅದ....ಏನಂತೀ, ಹೇಳೋವವರ ಕಡೆ ಕೇಳುವವರು ನೋಡಬಾರ್ದು ಅಂತ ಕರಾರೇ ಅದ ಈ ಕತೆಗೆ....ಆಂ ?....ಹಂ ?....( ಎನ್ನುತ್ತ ಕುರ್ಚಿಯ ಮೇಲೆ ಕುಳಿತುಕೊಂಡು, ಮಂದಾಕಿನಿಯನ್ನು ಕುರ್ಚಿಯ ಕೈಮೇಲೆ ಕುಳ್ಳಿರಿಸಿ, ಆಕೆಯ ಬೆನ್ನಮೇಲೆ ಎಡಗೈಯನಾಡಿಸುತ್ತ ) ಹೀಂಗ ಒಬ್ಬ ಅರಸ ಇದ್ದಂತ....ಆಂ ?....ಆ ಅರಸಗ ಒಬ್ಬ ಮಗಳು ...ಆಕೆಯ ಕಣ್ಣು ಬಹಾಳ ಸುಂದರ ಇದ್ದವು ಅಂತ—ಏನು? ಆ ?—ಬಹಾಳ ಅಂದ್ರ ಬಹಳೇ ಸುಂದರ ಇದ್ದವು ಅಂತ....ಆದ್ರ ಅಂಥಾ ತನ್ನ ಕಣ್ಣು ತನಗೆ ಕಾಣಿಸೋದಿಲ್ಲ ಅಂತ ಕೆಟ್ಟ ಅನಿಸಿಕೊಂಡು ಆಕೆ ಅಳಲಿಕ್ಕೆ ಹತ್ತಿದಳಂತೆ....ಅಳೋ ಆಕೆಯ ಕಣ್ಣೀರ ಹನಿ ಮಲಗಿದ ಅರಸನ ಮುಖದ ಮ್ಯಾಲೆ ಬಿತ್ತಂತ ಟಪ್ ಅಂತ—ಏನು ? ಆಂ ?—ಯಾರದು ? ಅರಸನದು—ಆಗ ತಟ್ಟನೆ ಎದ್ದು ಬಂದಂತ ಅಜ್ಜ—ಅಲ್ಲಲ್ಲ—ಅರಸ—ಆಂ ?.... ( ಮಂದಾಕಿನಿ ನಗಲು ತಾನೂ ನಕ್ಕು, ಆಕೆಯ ಮುಖವನ್ನು ಬಲಗೈಯಿಂದ ತನ್ನ ಕಡೆಗೆ ತಿರುಗಿಸಿ ) ನೋಡಿ-ದೆಯಾ, ನಕ್ಕು ನಿನ್ನ ಕಣ್ಣೊಳಗೂ ನೀರು ಬಂದವು—ಆಂ ?—ಸುಬ್ಬಣ್ಣ ಸಂಜೆಗೆ ಬರ್ತೀನಿ ಅಂತ ಹೇಳಿ ಹೋದ—ಹೋದ ಏನ್ಮಣ್ಣು ?—ಹೇಳಿ ಓಡಿದ ! ಅದಕ್ಕ ಬಂದೆ ನಾನು—ತಪ್ಪಿ ನೀನೇ ಅವನ್ನ ಕೆಳಗ ನೂಕಿದೆಯೊ—ಏನು ಒಂದು ಕಡೆ ನೋಡತಾ ಇನ್ನೊಂದು ಕಡೆ ಇಳಿಯುವಾಗ ಅವನೇ ಎಡವಿಕೊಂಡು ಉರುಳತಾ ಹೋದನೊ ಅಂತ—ಆಂ ?

ಮಂದಾಕಿನಿ :— ( ಎದ್ದು ತುಸು ದೂರ ನಡೆದು, ಅಜ್ಜನಿಗೆ ಇದಿರಾಗಿ ನಿಂತು ) ಅಜ್ಜ, ಈ ಹೊತ್ತು ನನಗ ಬ್ಯಾರೆ ಯಾವ ವಿಚಾರನೂ ಇಲ್ಲ. ( ಸೀರೆಯ ಮೇಲೆ ಕೈಯನಾಡಿಸುತ್ತ ) ಯಾಕ ಗೊತ್ತಿದೆ ಏನು ?

ಅಜ್ಜ :— ( ಒಂದರೆ ನಿಮಿಷ ದಿಟ್ಟಿಸಿ ) ಹುಂ....ನಾನು ತಂದ ಸೀರೆ !.... ನೋಡಿದಿಯಾ ಮುದಕನ ದುರ್ದೈವ!....ಮುತ್ತಿನಂಥಾ ಮೊಮ್ಮಗಳು ಉಟ್ಕೊಂಡು ಮುಂದೇ ನಿಂತರೂ ಕಾಣಿಸಿಲ್ಲ....ಆಂ ?....ಈಗ ತಿಳೀತು....ಸುಬ್ಬಣ್ಣ ಯಾಕ ಹಾಗ ದಿಕ್ಕು ತಪ್ಪಿದವರ್ಹಾಂಗ ಓಡಿದ ಅಂತ—

ಮಂದಾಕಿನಿ :— ಅವರ್ನೇನು ಮಾಡೋದು ?....ನೀ ಹೇಳಿದಿ ಅಂತ—

ಅಜ್ಜ :— ( ನಡುವೆಯೆ ) ಅವನ್ನ ಏನು ಮಾಡೋದು ಅಂತ ನನಗೂ ದಿಗಿಲುಬಿದ್ದಿದೆ. ನಾ ಒಂದು ಮಾತು ಹೇಳಿದರ ನೀನು ಸಿಟ್ಟಿಗೆ ಬರ್ತ್ಬಾರ್ದು ಮಂದೂ....ಈ ಸ್ವರಾಜ್ಯ ಸಿಕ್ಕು ನಿಮ್ಮ ಚಳವಳಿ ಮುಗಿದ ಮಾತ್ರ ಹೊತ್ತು ಹೋಗಲಾರಧಾಂಗ ಆಗೇದಲ್ಲ ?

ಮಂದಾಕಿನಿ :— ಆದ್ರ, ಯಾಕ ಆಗ್ಬೇಕು ?

ಅಜ್ಜ:—ನನಗೇನು ಕೇಳ್ತೀ ?....ಆಂ?....ನೀನೇ ಇದ್ವಿ ಚಳವಳಿಯೊಳಗ—

ಮಂದಾಕಿನಿ :— ( ನಡುವೆಯೆ ) ನನ್ನ ಪಾಲಿನ ಚಳವಳಿ ಇನ್ನೂ ಮುಗಿದಿಲ್ಲ.

ಅಜ್ಜ :— ಅಂದ್ರ ? (ಮಂದಾಕಿನಿ ಮಾತನಾಡದೆ ಇನ್ನೊಂದು ಕುರ್ಚಿಯ ಹತ್ತಿರ ಬಂದು ಪೇಪರುಗಳನ್ನು ಎತ್ತಿಹಾಕುತ್ತ ನಿಲ್ಲುವಳು) ಮಂದೂ, ಕೂಡು ಇಲ್ಲಿ....ಕೂಡು. ( ಆಕೆ ಇನ್ನೊಂದು ಕುರ್ಚಿಯಲ್ಲಿ ಕೂಡುವಳು ) ಈ ಮನೇವಳಗ ನಾವು ಎಷ್ಟು ಮಂದಿ ?

ಮಂದಾಕಿನಿ :— ( ಸಂದರ್ಭ ತಿಳಿಯದೆ ಅಜ್ಜನನ್ನು ಮಿಕಿಮಿಕಿಸುವಳು )

ಅಜ್ಜ :— ನಾವೆಷ್ಟು ಮಂದಿ ಅಂದೆ ಈ ಮನೇವಳ್ಗ ? ಆಂ ?....ಕೆಲಸ-ದವರನ್ನ ಬಿಟ್ಟು—?

ಮಂದಾಕಿನಿ :— ( ಮುಗುಳ್ನಗೆಯಿಂದ ) ಮೂರು ಜನ....

ಅಜ್ಜ :— ( ತಲೆ ಅಲ್ಲಾಡಿಸಿ, ಸೋಗಿನ ನಿರಾಶೆಯ ದನಿಯಲ್ಲಿ) ಊಹುಂ-ಅಲ್ಲ-ತಪ್ಪು ...ನೀನು ಹ್ಯಾಂಗ ಬಿ. ಎ. ಆದಿ ಅಂತೀನಿ ?

**ಮಂದಾಕಿನಿ :—** ( ಪುಡುಗತನದ ಹಟದಿಂದ ) ಅಜ್ಜ, ಅಪ್ಪ, ನಾನು.

**ಅಜ್ಜ :—** ಮೂರೂ ಕೂಡಿಸಿದರ ಎಷ್ಟು ಆಯ್ತು ?

**ಮಂದಾಕಿನಿ :—** ( ತಿಳಿಯದೆ ) ಮೂರೂ ಕೂಡಿಸಿದರ—

**ಅಜ್ಜ :—** ಮೂರೂ ಅಂದ್ರೆ ಒಂದು $\frac{1}{4}$, ಒಂದು $\frac{1}{2}$, ಒಂದು ೧—ಆಂ ? ( ನಗೆಯಿಂದ ) ನಾನು ಅರ್ಧ. ಬಿಂದು $\frac{1}{2}$. ನೀನು ಒಂದು....ಆಂ? ... ಹಹ !....ಹ್ಯಾಂಗದ ಲೆಕ್ಕ ?

**ಮಂದಾಕಿನಿ :—** ( ನಗುತ್ತ ) ಆಯ್ತು, ಅಜ್ಜ ಅರ್ಧ ಅಂದ್ರೆ—

**ಅಜ್ಜ :—** ( ನಡುವೆಯೆ ) ಅಹುದಹುದು, ತಪ್ಪಿದೆ. ನೀನು ಒಂದು ಅಂದ್ರೆ. ಬಿಂದು ಅರ್ಧ, ನಾನು ಅದರ ಅರ್ಧ....

**ಮಂದಾಕಿನಿ :—** ಇದು ಯಾವ ಲೆಕ್ಕ ?

**ಅಜ್ಜ :—** ಇದು ಸೃಷ್ಟಿಯ ಲೆಕ್ಕ. ಜೀವದ ಲೆಕ್ಕ....ಜೀವ ಬೆಳೆಯುವ ಲೆಕ್ಕ....ಆಂ ?....ಅಜ್ಜಗೇನು ದೊಡ್ಡದೊಡ್ಡ ವಿಚಾರ ತಿಳಿಯೋದಿಲ್ಲ ಅಂತ ಮಾಡೀದಿಯೇನು ?....ಅದಕ್ಕ ನಿನಗ ಹೇಳ್ತೀನಿ, ಮಂದೂ, ಲೆಕ್ಕ ಹೀಂಗ ಇರೋವಾಗ ಚಳವಳ ಮಾಡೋದು ನಿನ್ನ ಕೆಲಸ ಅಲ್ಲ. ನನ್ನದು. ಬೆಳೆಯೋ ಜೀವಕ್ಕ ಬೆಳೆಯೋದೊಂದೇ ಕೆಲಸ, ಬೆಳೆದ ಜೀವಕ್ಕ ಉಳಿಯೋದೊಂದು ಚಳವಳ. ಈಗ ನೀನು ಬೆಳೆಯಬೇಕು, ಅದನ್ನ ನೋಡ್ಲಿಕ್ಕೆ ನಾನು ಉಳಿಯಬೇಕು.

**ಮಂದಾಕಿನಿ :—** ( ಕಳಕಳಿಯಿಂದ ) ಅಜ್ಜ, ಅಜ್ಜ, ನೀನು ಉಳಿಯಬೇಕು, ಇನ್ನೂ ಬಹಾಳ ದಿವಸ ಉಳಿಯಬೇಕು—ಅನ್ನೋದಕ್ಕೇ ನನ್ನ ಚಳವಳ.

**ಅಜ್ಜ :—** ( ತಲೆ ಅಲ್ಲಾಡಿಸಿ ) ಈ ದೇಶಭಕ್ತರ ಲೆಕ್ಚರು ಕೊಡಬ್ಯಾಡ, ಕೊಟ್ಟರ ನಾನು ಚಪ್ಪಾಳೀನೂ ಹೊಡೆಯೋದಿಲ್ಲ....( ನಗೆಯಿಂದ ) ಕೈಕೈ ಚಪ್ಪಾಳೆ ಹೊಡೀದಿದ್ರೂ, ಬೆನ್ನು ಚಪ್ಪರಿಸತೀನಿ—ನನ್ನ ಮಂದೂ ಬಹಾಳ ಬುದ್ಧಿವಂತಿ ಅಂತ....ಆದ್ರೆ—ಆದ್ರೆ—ನಿನ್ನ ಬುದ್ಧಿ-ವಂತಿಕೆ ತಿಳಿದುಕೊಳ್ಳೋ ಅಷ್ಟು ಬುದ್ಧಿ ಆ ಸುಬ್ಬಣ್ಣಗ ಅದನೊ ಇಲ್ಲೊ ಅಂತ ನನ್ನ—ಹಹ ! ಬಂದಳು, ಬಂದಳು ಸಿಟ್ಟಿಗೆ ಮಿಸ್ ಮಂದೂ ! ಹಹ !

**ಮಂದಾಕಿನಿ** :— ( ನೊಂದ ದನಿಯಲ್ಲಿ ) ಅಜ್ಜ—

**ಅಜ್ಜ** :— ( ಸಂಶಯದಿಂದ ) ಏನು—ಏನು ಮಂದೂ ?

**ಮಂದಾಕಿನಿ** :— ( ಕೆಳಗೆ ನೋಡುತ್ತ ) ನೀನು ತಪ್ಪು ತಿಳಿದುಕೊಂಡೀದಿ....

**ಅಜ್ಜ** :— ಓಹೊ ! ಹೊಸ ಸೀರೆ ಉಟ್ಟ ಆನಂದಕ್ಕ ಕಣ್ಣೊಳಗ ನೀರು ಬಂದಿತ್ತೇನು ಹಾಂಗಿದ್ದರ ? ಆಂ ?

**ಮಂದಾಕಿನಿ** :— ( ಹೇಳಿದಂತೆ ) ಸುಬ್ಬಣ್ಣ ಅವರ ಸಲುವಾಗಿ ನೀನು ತಿಳಧಾಂಗ ಯಾವ ವಿಚಾರ್ನ್ನೂ ಇಲ್ಲ ನನ್ನ ಮನಸಿನೊಳಗ—

**ಅಜ್ಜ** :— ಅದನ್ನ ನಾನು ಕೇಳಿದಾಗ ಹೇಳೀಯಂತ....ಇಲ್ಲಿದ್ರೆ ಇಲ್ಲ—

**ಮಂದಾಕಿನಿ** :— ನಾನು ಎಂದಿಗೂ ಈ ಮನೆ ಬಿಟ್ಟು ಹೋಗೋದಿಲ್ಲ—

**ಅಜ್ಜ** :— ಹುಚ್ಚಿ ! ಮನೆ ಬಿಟ್ಟು ಹೋಗುವವ ನಾನು, ಅರ್ಧ ಜೀವ ಒಡಿದವ....

**ಮಂದಾಕಿನಿ** :— ( ಒಮ್ಮೆಲೆ ಹಟದಿಂದ ) ನಾನು ಎಂದೆಂದಿಗೂ ಈ ಮನೆ ಬಿಟ್ಟು ಹೋಗೋದಿಲ್ಲ ಅಂದೆ.

**ಅಜ್ಜ** :—( ಎದ್ದು ) ಏಳು, ಮಂದೂ.

**ಮಂದಾಕಿನಿ** :— ಏನು—ಏನು, ಅಜ್ಜ ? ( ಮೆಲ್ಲಗೆ ಏಳುವಳು )

**ಅಜ್ಜ** :— ( ಸೋಗಿನ ಸಿಟ್ಟಿನಿಂದ ) ನಿನ್ನ ಈ ಮನೆಯಿಂದ ಹೊರಗ ಹಾಕ್ತೇನಿ ಅಂದೆ—ಆಂ ?—ಆಮ್ಯಾಲೆ ಹ್ಯಾಗೆ ಹೋಗೋದಿಲ್ಲ ನೋಡ್ತೇನಿ....ಆಂ ?....( ಒಮ್ಮೆಲೆ ನಕ್ಕು ) ನೀನು ಇದ್ದಲ್ಲೇ ಮನೆ, ಮಂದೂ, ನೀನು ಎಲ್ಲಿ ಹೋದ್ರೇನು ?

**ಮಂದಾಕಿನಿ** :— ( ಹಟಮಾರಿತನದ ದನಿಯಲ್ಲಿ ) ನಾನು ಎಲ್ಲಿಯೂ ಹೋಗೋದಿಲ್ಲ.

**ಅಜ್ಜ** :— ( ಚಕಿತನಾದವನಂತೆ ) ಇದಕ್ಕನ್ನೋದು ಬಿ. ಎ. ದ ಬುದ್ಧಿಗೇಡಿ ಅಂತ. ಕೆಳಗ ಊಟಕ್ಕ ಕೂಡಾ ಹೋಗೋದಿಲ್ಲ ?

**ಮಂದಾಕಿನಿ** :— ( ನಾಚಿ ) ನಿನ್ದೂ ಒಂದು ಮಾತಿನ ಮೋಜು.

**ಅಜ್ಜ** :— ಕೈಲೆ ಕೆಲಸ ಆಗದಿದ್ದಾಗ ಬಾಯಿಯು ಬಡಬಡಿಕೀದೇ ಮೋಜು—ಆಂ ?

**ಮಂದಾಕಿನಿ** :— ಹಾಗಾದ್ರೆ ಆ ಕೈ ತಾ ಇಲ್ಲಿ, ಅಜ್ಜ.

**ಅಜ್ಜ** :— ಇದೇನು ?

**ಮಂದಾಕಿನಿ** :— ನಿನ್ನ ಕೈ, ನನ್ನ ಕೆಲಸ ನೀನೇ ಹೇಳಿದ್ದೆಯಲ್ಲ, ನಿನ್ನ ಜರಾ ಮತ್ತು ನನ್ನ ಜೀವನದ ಸಂಧಿ ಆಗಲಿ ಅಂತ—(ಅವನ ಕೈಯನ್ನು ಕೈಯಲ್ಲಿ ಹಿಡಿದು) ನಿನಗ ಈಗ ಹಾದಿ ತೋರಿಸಲಿಕ್ಕೆ ಕೈ ಹಿಡಿದಿಲ್ಲ, ಅಜ್ಜ....ನಾನು ಇನ್ನು ಹೋಗಬೇಕನ್ನೋ ಹೊಸ ಹಾದಿಯೊಳಗ ನನಗ ಧೈರ್ಯ ಬರಲಿ ಅಂತ ನಿನ್ನ ಕೈ ಹಿಡಿದದ್ದು.

**ಅಜ್ಜ** :— (ನಗುತ್ತ) ಊಟದ ಹೊತ್ತಿಗಿಷ್ಟು ಖಾಲಿ ಬಿಟ್ಟರ ಸಾಕು—ಅಂ ?—ಹಹ !....(ಕಳಕಳಿಯಿಂದ) ಹುಚ್ಚೀ, ಮಂದೂ !

[ ಆಕೆ ಒಮ್ಮೆಲೆ ಮುಖ ತಿರುಗಿಸುವಳು. ಅಜ್ಜನು ಧೈರ್ಯಕೊಡುವಂತೆ ಬೆನ್ನು ಚಪ್ಪರಿಸುವಾಗ—]

(ತೆರೆ)

## ಎರಡನೆಯ ಅಂಕ ಮುಗಿದುದು.

# ಅಂಕ ೩

[ ಮರುದಿನ ಮುಂಜಾನಿನ ಎಂಟು-ಎಂಟೂವರೆ ಗಂಟೆಯ ಸಮಯ. ಅಜ್ಜನ ಕೋಣೆಯ ದೃಶ್ಯ. ರಂಗಭೂಮಿಯ ಮೇಲೆ ಕಾಣುವುದು ಇದಿರಿನ ಗೋಡೆಗೆ ಎರಡು ದೊಡ್ಡ ಕಿಟಕಿಗಳು; ಆ ಕಿಟಕಿಗಳಿಂದ ಹೊರಗಿನ ಗಿಡಬಳ್ಳಿಗಳ ಅಸ್ಪಷ್ಟ ಕಲ್ಪನೆ ಬರುವಂತಿದೆ. ಆ ಎರಡೂ ಕಿಟಕಿಗಳ ನಡುವೆ—ರಂಗದ ತುಸು ಮುಂಬದಿಗೆ—ಒಂದು ಕೂಡುವ ಮಂಚ, ಅದರ ಮುಂದೆ ಒಂದು ದುಂಡು (ಚಿಕ್ಕ) ಮೇಜು. (ಪ್ರೇಕ್ಷಕರ) ಬಲಬದಿಯ ಗೋಡೆಯಗುಂಟ (ರಂಗದ) ಮುಂಬದಿಯಿಂದ ಒಂದು ಕಿಟಕಿಯ ಕಡೆಗೆ ಒಂದು ಮಲಗುವ ಮಂಚವಿದೆ. ಆ ಮಂಚ ಮತ್ತು (ಬಲಬದಿಯ) ಗೋಡೆಯ ನಡುವೆ ಒಂದು ಚಿಕ್ಕ ಶೆಲ್ಫ; ಅದರ ಮೇಲೆ ಪುಸ್ತಕ, ಇಲಸ್ಟ್ರೇಟೆಡ್ ವೀಕ್ಲಿ ಮೊದಲ್ಮಾಡಿ ಕೆಲವು ನಿಯತಕಾಲಿಕೆಗಳು ಇವೆ. (ಎಡಬದಿಯ) ಗೋಡೆಗೆ ಈ ಕೋಣೆಗೆ ಬರುವ ಬಾಗಿಲು ಇದೆ. ಬಾಗಿಲಿನಿಂದ ಬಂದರೆ ಎಡದ ಗೋಡೆಗೆ ಒಂದು ಕ್ಯಾಲೆಂಡರ್ ಇದೆ; ತುಸು ಮುಂದೆ ಬಂದರೆ ಕೂಡುವ ಮಂಚದ ಬದಿಗೆ ಒಂದು ದೊಡ್ಡ ಕುರ್ಚಿ ಇದೆ. ಬಾಗಿಲಿನ ಬಲಬದಿಗೆ ಇನ್ನೊಂದು ಸಣ್ಣ ದುಂಡು ಮೇಜು ಇದ್ದು ಸದ್ಯಕ್ಕೆ ಅದರ ಮೇಲೆ ಕೆಲವು ವೃತ್ತಪತ್ರಗಳಿವೆ.

ತೆರೆ ಮೇಲಕ್ಕೆದ್ದಾಗ ಯಾರೂ ಇರುವುದಿಲ್ಲ. ಒಂದು ನಿಮಿಷದಲ್ಲಿ ಸುಬ್ಬಣ್ಣನೂ ಚೆನ್ನನೂ ಬರುವರು, ಸುಬ್ಬಣ್ಣ ನಿತ್ಯದ ವೇಷ ತೊಟ್ಟು ಕೊರಳಿಗೆ ಒಂದು ಸ್ಕಾರ್ಫ್ ಸುತ್ತಿದ್ದಾನೆ. ಎರಡೂ ಕೈಗಳನ್ನು ಅಧೈರ್ಯದಿಂದ ತಿಕ್ಕುತ್ತಲೆ ಬರುವನು. ಹಿಂದೆ ಚೆನ್ನ ಇದ್ದಾನೆ. ಸುಬ್ಬಣ್ಣ ಒಳಗೆ ಬಂದು ತಿರುಗಿ ನಿಂತು ತನ್ನನ್ನು ನೋಡಲು—]

**ಚೆನ್ನ:**— ದೊಡ್ಡ ಅಜ್ಜನೋರು ಹೇಳ್ಯಾರ್ರಿ "ಸುಬ್ಬಣ್ಣ ವಕೀಲ ಬಂದ್ರ, ನನ್ನ ಕ್ಯಾಣೀವಳಗ ಕೂಡಿಸೊ, ಚೆನ್ನ" ಅಂತ.... (ಸುಬ್ಬಣ್ಣನು

ನಿಲ್ಲುವನು) ಕೂಡಿಸಾಕೇ ಹೇಳ್ಯಾರ್ರಿ.... (ಮತ್ತೆ ತಿರುಗುತ್ತ) ಸಾವ್ಕಾರ್ರ, ಕುಂತುಗೋರಿ....

**ಸುಬ್ಬಣ್ಣ** :— (ಸಿಡುಕಿನ ದನಿಯಲ್ಲಿ) ಇರಲ್ಯೊ—

**ಚೆನ್ನ** :— (ತುಸು ಮುಂದೆ ಬಂದು) ಬಾದವ್ರಿಗೆ ಕುಂತುಗೋಳಾಕ ಹೇಳ್ಬೇಕು ಅಂತ ಹೇಳ್ಯಾರ್ರಿ....ಈಗ ನೀವ್ರು ಕುಂದರಲಿಲ್ಲಾಂದ್ರ ದೊಡ್ಡ ಅಜ್ಜನೋರ ಗದಾರ್ಸೇ ಬರ್ತೈತಿರಿ ನನ್ನ ಜೆಸ್ಸವ್ಯಾಗ.

**ಸುಬ್ಬಣ್ಣ** :—(ಅನಿವಾರ್ಯವಾದ ನಗೆಯನ್ನು ತಡೆಯುತ್ತ) ಕೂಡ್ರೀಸೊ... ನಿನ್ನ ದೊಡ್ಡ ಅಜ್ಜನೋರು ಬಂದಾಗ ಕೂತಿದ್ದರ ಸಾಕಲ್ಲ?

**ಚೆನ್ನ** :— (ತುಸು ತಿಳಿಸಿಕೊಳ್ಳಲು ಯತ್ನ ಮಾಡಿ) ಹಾಗಾ!...ಅಟಾದರ ಸಾಕ್ರಿ...ಆವ್ವಾ ಅವ್ರಿಗೂ ಹೇಳ್ತೇನ್ರಿ ವಕೀಲ್ರು ಬಾವಾರಂತ. (ಹೊರಡಬೇಕೆನ್ನಲು)

**ಸುಬ್ಬಣ್ಣ** :— (ಒಮ್ಮೆಲೆ) ಹಾಂ—(ಚೆನ್ನನು ತಡೆಯುವನು) ಅವರ್ಮುಂದ ಆ ಮಾತು ಎತ್ತಬ್ಯಾಡ—

**ಚೆನ್ನ**.— (ತಲೆ ತೂಗುವಾಗ ಒಮ್ಮೆಲೆ ತಡೆದು) ಯಾನಂದಿರಿ?

**ಸುಬ್ಬಣ್ಣ** :— (ತುಸು ಬೇಜಾರದ ದನಿಯಲ್ಲಿ) ಅವರ್ಮುಂದ ಆ ಮಾತು ಎತ್ತಬ್ಯಾಡ—ಅಂದೆ.

**ಚೆನ್ನ** :— (ತಲೆ ತುರಿಸುತ್ತ) ನನ್ದೆ ಖೊಟ್ಟಿ–ರಿ ನಶೀಬ!

**ಸುಬ್ಬಣ್ಣ** :— (ತಿಳಿಯದೆ) ಏನಂದೆ?

**ಚೆನ್ನ** :— ನಶೀಬ ಖೊಟ್ಟಿ–ರಿ ನನ್ದು—ಅಂದೆ....

**ಸುಬ್ಬಣ್ಣ** :— (ಮುಗುಳ್ನಗೆಯಿಂದ) ಯಾಕೊ? ಅಂಥಾದ್ದೇನಾಯ್ತು ಈಗ?

**ಚೆನ್ನ** :— (ಅರ್ಥ ತನ್ನಷ್ಟಕ್ಕೆ ಎಂಬಂತೆ) ಇದೆಲ್ಲಾ ಆ ಅಂತಪ್ಪನ ಚಾಡಿ.... ತಿಳೀತು, ಬಿಡ್ರಿ...ಬೇಕಾದ್ದ ಎತ್ತುವವ ನಾ ಅಂತ ಬೊಬ್ಬಾಟ ಮಾಡಿದ ಬರಾಮಣ....ನಿಮ್ದೇನು ತಪ್ಪ–ರಿ?....ಮಾತು ಸುದ್ಧಾ ಎತ್ತೀನಿ ನಾನು ಅಂತ ತಿಳಕೊಂಡ್ರಿ....ಹೇಳಿದೆನಲ್ರಿ. ಖೊಟ್ಟಿ ನಶೀಬ ಅಂತ....

**ಸುಬ್ಬಣ್ಣ** :— ( ಸಂದರ್ಭ ತಿಳಿಯದಿದ್ದರೂ ಸಂತೈಸಲು ಯತ್ನಿಸುತ್ತ ) ಏ, ಹುಚ್ಚ !....ನನ್ನ ಬ್ಯಾರೇ ಕೆಲಸ ಇದ ವಾಂಡಪ್ಪನೋರ ಕಡೆ, ಅದಕ್ಕ ಬೆಳಿಗ್ಗೆ ಇಷ್ಟು ಲಗೂ ಬಂದೀನಿ, ನಿಮ್ಮ ಅವ್ವಾ ಅವ್ರಿಗೆ ತ್ರಾಸ ಕೊಡೋದು ಬ್ಯಾಡ ಅಂದೆ....( ಕೂಡುವ ಮಂಚದಲ್ಲಿ ಕೂಡುತ್ತ) ಇದು ನೋಡು. ಈಗ ನಾನು ಕೂತೆ. ಇನ್ನಾದರೂ ಸಮಾಧಾನ ಆಯಿತಿಲ್ಲೊ ?

**ಚೆನ್ನ** :—(ವಿಷಾದದಿಂದಲೆ ತಲೆ ತೂಗುತ್ತ ಬಾಗಿಲವರೆಗೆ ಹೋಗಿ, ಮತ್ತೆ ಬಂದು, ಅಧೈರ್ಯದಿಂದ) ಸಾವ್ಕಾರ್‍ರ —

**ಸುಬ್ಬಣ್ಣ** :— ( ಅತಿಶಯ ಬೇಜಾರದಿಂದ ) ಯಾ–ಆ–ಕೊ ?

**ಚೆನ್ನ** :— ನನ್ನೂ ಒಯ್ದು ಬಿಡ್ತೀರೇನ್ರಿ ?

**ಸುಬ್ಬಣ್ಣ** :— ಎಲ್ಲಿಗೊ ?

**ಚೆನ್ನ** :— ನೀವು ಈ ಊರ ಬಿಡೋರಿದ್ದೀರಂತ—

**ಸುಬ್ಬಣ್ಣ** :— ( ಒಮ್ಮೆಲೆ ಚಕಿತನಾಗಿ ) ಏನು ? ಏನಂದೆ ?

**ಚೆನ್ನ** :— ( ಆ ದನಿಗೆ ಹೆದರಿ) ಅಲ್ರಿ, ನಿನ್ನೆ ರಾತ್ರಿ ಅಂತಪ್ಪನೆ ಅಂತಿದ್ನರಿ, ದೊಡ್ಡ ಅಜ್ಜನೋರು ಅಂತಿದ್ರಂತ, ನೀವು ಈ ಊರ ಬಿಡ್ತೀರಿ ಅಂತ—

**ಸುಬ್ಬಣ್ಣ** :— ( ಮಾತು ಹಾರಿಸುವ ಯತ್ನದಲ್ಲಿ ) ಛಿ ! ಹುಚ್ಚ ! ನಾ ಊರು ಬಿಟ್ಟರ, ಊರು ನನ್ನ ಬಿಡ್ತದ ಅಂತ ತಿಳ್ದೀಯೇನು ?

**ಚೆನ್ನ** :— ( ಒಮ್ಮೆಲೆ ಅಭಿಮಾನದ ನಗೆಯಿಂದ ಮುಖವನ್ನರಳಿಸಿ ) ಹೌದ್ರಿ, ಸಾವ್ಕಾರ್‍ರ ಜೆಂವಾ ಇದೇ ಊರಾಗ ಐತಿ, ಅವರ್‍ಯಾಕ ಊರ ಬಿಡಲಾಕ—

**ಸುಬ್ಬಣ್ಣ** :— ( ನಡುವೆಯೆ ) ಅಲ್ಲೊ, ಚೆನ್ನಾ, ನಿಂಜೋಡೀನೇ ಮಾತಾಡ್ಲಿಕ್ಕೆ ಬಂಧಾಂಗ ಆಗೇದಲ್ಲೊ ?

**ಚೆನ್ನ** :— ( ಮತ್ತೆ ಹೊರಡುತ್ತ ) ಹೊಂಟೆನ್ರಿ, ಸಾವ್ಕಾರ್‍ರ....ಅಂದ್ರ ದೊಡ್ಡ ಅಜ್ಜನೋರೊಬ್ಬರಿಗೇ ಹೇಳಬೇಕಿಲ್ರಿ ನೀವು ಬಾದೀರಂತ—

**ಸುಬ್ಬಣ್ಣ** :— ( ಏಳುತ್ತ ) ನೀನಿನ್ನು ಲಗೂ ಹೋಗಲಿಲ್ಲ ಅಂದ್ರ ನಾನು ಎದ್ದೇ ಬಿಡ್ತೀನಿ ನೋಡು.

( ಎದ್ದು ಬಾಗಿಲದ ಹತ್ತಿರದ ದುಂಡು ಮೇಜಿನ ಕಡೆಗೆ ನಡೆಯುವನು )

**ಚೆನ್ನ** :— ( ಗಾಬರಿಯಿಂದ ) ಹೊಂಟೀ ಬಿಟ್ಟನ್ರಿ, ನಾವಪ್ಪಾರ್ರ—

**ಸುಬ್ಬಣ್ಣ** :— ( ಮೇಜಿನ ಮೇಲಿನ ವೃತ್ತಪತ್ರವನ್ನೆತ್ತಿಕೊಂಡು) ಹೋಗು— ನನಗ ಪೇಪರ್ ನೋಡ್ಬೇಕಾಗೇದ ( ಎಂದು ಮತ್ತೆ ಸೋಫಾದ ಕಡೆಗೆ ನಡೆಯುವನು. ಚೆನ್ನ ಬಾಗಿಲಲ್ಲಿ ತಡೆಯುವನು. ಅವನ್ನು ನೋಡಿ ಸುಬ್ಬಣ್ಣನು ಕೂಡುವಂತೆ ನಟಿಸಲು ಚೆನ್ನನು ಸಮಾಧಾನದಿಂದ ಉಸು-ರ್ಗರೆದು ಹೋಗುವನು ಸುಬ್ಬಣ್ಣನು ಮಾತ್ರ ನಗೆಯಿಂದ ಕೂಡದೆ ಹಾಗೇ ಎದ್ದು ನಿಲ್ಲುವನು. )

[ ಕ್ರಮೇಣ ಸುಬ್ಬಣ್ಣನ ಮುಖದಲ್ಲಿ ನಗೆ ಮಾಯವಾಗುವುದು. ಓದಲು ಬಿಚ್ಚಿದ ಪತ್ರಿಕೆಯನ್ನು ಮತ್ತೆ ಮುಚ್ಚಿ ಶೂನ್ಯದೃಷ್ಟಿಯಿಂದ ನೋಡುತ್ತ ನಿಲ್ಲುವನು. ಮೊದಲು ಮಂಚದ ಕಡೆಗೆ ನಡೆದು, ಅಲ್ಲಿ ನಿಂತು, ಮತ್ತೆ ತಿರುಗಿ ಬಾಗಿಲ ಕಡೆಗೆ ನಡೆಯುವನು ಬಾಗಿಲವರೆಗೆ ಬಂದು ಹೊರಗಿನಿಂದ ಏನಾದರೂ ನಮ್ಮ ಇದೆ ಏನೆಂದು ಲಕ್ಷ್ಯಗೊಟ್ಟಂತೆ ಮಾಡಿ ಬೆನ್ನಿಗೆ ಕೈಕಟ್ಟಿಕೊಂಡು ಮತ್ತೆ ಒಳಗೆ ನಡೆಯುವನು ಇಷ್ಟರಲ್ಲಿ ಹಿಂದಿನಿಂದ ಬಿಂದೂರಾಯ ಬರುವ. ಇಬ್ಬರೂ ಮೊದಲಿಗೆ ಒಬ್ಬರನ್ನೊಬ್ಬರು ನೋಡಿರುವುದಿಲ್ಲ ಬಿಂದೂರಾಯ ಒಂದು ಕೋಟು ತೊಟ್ಟ-ವ್ವಾನೆ, ಬರಿ ತಲೆ, ಎಡಗೈಯಲ್ಲಿ ವಾಕಿಂಗ್ ಸ್ಟಿಕ್, ಬಲಗೈಯಲ್ಲಿ ಒಂದು ಪುಸ್ತಕ. ಬಂದವನೆ—]

**ಬಿಂದೂರಾಯ** :—( ಗಡಿಬಿಡಿಯಿಂದ ) Where's my artiಕಲ್ನನ್ನ ಲೇಖ ಬಂದದೊ ಇಲ್ಲೊ ? ( ಬಾಗಿಲಿನ ಬದಿಯ ದುಂಡುಮೇಜಿನ ಮೇಲೆ ಕೈಹಾಕಿ ) ಛೆ ! ಈಹೊತ್ತಿನ paperಉ,⋯Where's today's wretched paper ? (ಎಂದು ಮುಖವೆತ್ತಿ ನೋಡುವುದಕ್ಕೂ ಸುಬ್ಬಣ್ಣನು ತಿರುಗಾಟ ತಡೆದು ತಿರುಗಿ ನಿಲ್ಲುವುದು ಹೊಂದಿಕೆಯಾಗಲು ಚಕಿತನಾಗಿ) ಎಲೆ ! ಏನು ? What's this ? I wanted to see—ಈ ಹೊತ್ತಿನ paper ನೋಡ್ಬೇಕಾಗಿತ್ತು⋯ನೀವು ಯಾವಾಗ—When did you come—why—ಯಾಕ ಬಂದೀರಿ—ಅಂದ್ರ—ಅಲ್ಲ ನನಗ ಕಲ್ಪನಾ ಇರಲಿಲ್ಲ ⋯I had no idea—(ಉಸಿರು ಸಾಲದೆಂಬಂತೆ ತಡೆಯುವನು )

**ಸುಬ್ಬಣ್ಣ** :— ನಾನು—ಅಂದ್ರೆ—ಅಲ್ಲ—ವಾಡಪ್ಪನೋರ ಕಡೆ ಕೆಲಸ ಇತ್ತು—

**ಬಿಂದೂರಾಯ** :— ( ನಡುವೆಯೆ ) I know, I know ನನಗೊತ್ತಿದೆ, ಕೂಡ್ರಿ, Sitdown.

[ ಸುಬ್ಬಣ್ಣನು ಕೊಟ್ಟ paper ತೆಗೆದುಕೊಂಡು ಅದನ್ನು ನೋಡುತ್ತ ಸೋಫಾದ ಬದಿಯ ಕುರ್ಚಿಯಲ್ಲಿ ಕುಳಿತುಕೊಳ್ಳುವನು ಒಮ್ಮೆಲೆ ಅವನಿಗೆ ಬೇರೆ ಕಡೆಗೆ ಲಕ್ಷ್ಯವೆ ಇಲ್ಲದಂತಾಗಿ paperದಲ್ಲಿ ಬಂದಿರಬಹುದಾದ ತನ್ನ ಲೇಖನವನ್ನು ಹುಡುಕುತ್ತ ಓದತೊಡಗುವನು. ಸುಬ್ಬಣ್ಣನಿಗೆ ಏನು ಮಾಡಬೇಕೆಂಬುದು ತಿಳಿಯ ದಂತಾಗಿ—ಒಂದು ನಿಮಿಷ ಹಾಗೇ ನಿಂತು—ಕೊನೆಗ ಸೋಫಾದಲ್ಲಿ ಕುಳಿತು ಕೊಳ್ಳುವನು. ]

**ಬಿಂದೂರಾಯ** :— ( ಓದುವುದನ್ನು ತಡೆದು ) Nonsense! ಹುಚ್ಚು! ದೇಶಕ್ಕ " ಮನೋರಚನಾ " ಬೇಕು ಅಂತ ನಾ ಬರೆದರೆ " ಪುನರ್ ರಚನಾ" ಅಂತ ಛಾಪಿಸ್ಯಾರೆ. Where's the first construction? ಮೊದಲೊಮ್ಮೆ ರಚನಾ ಆಗಿದ್ದರ ಈಗ " ಪುನರ್ರಚನಾ "…. Reconstruction of the Mind, ನಂ ಜನರ ಮನಸ್ಸನ್ನ ತಯಾರ ಮಾಡಬೇಕು-[ ಎನ್ನುತ್ತ ಸುಬ್ಬಣ್ಣನನ್ನು ನೋಡಿ ] ಯಾವಾಗ ಬಂದಿರಿ ನೀವು—when—( ಲಕ್ಷ್ಯಕ್ಕೆ ಬಂದು ) ಈಗೊಮ್ಮೆ ಬಂದಿದ್ದಿರಲ್ಲ ನೀವು—Yes, I wanted to talk to you—ನಿಂ ಜೋಡಿ ನನಗೂ ಮಾತು ಆಡಿಯೇ ಬೇಕಾಗಿತ್ತು—

**ಸುಬ್ಬಣ್ಣ** :— ( ನಗೆಯಿಂದ ) ಈಗ ನಂಜೋಡೀನೇ ಮಾತಾಡ್ತಿದ್ದಿರೇನು ?

**ಬಿಂದೂರಾಯ** :— ಅಲ್ಲ— ಈ paper—ಅಂದ್ರೆ ಎಷ್ಟು stupid ಮೂರ್ಖರು ಈ ಜನ ಅಂತ….ಬರೆದದ್ದು ಕೂಡಾ ತಿಳೀಬಾರ್ದು— ಅಂದ್ರೆ— they can't follow what's plain written— ಸ್ಪಷ್ಟ ಬರದೇನಿ ನಾನು—

**ಸುಬ್ಬಣ್ಣ** :— ( ನಡುವೆಯೆ ) ಅಲ್ಲ, ನಂಜೋಡಿ ಮಾತಾಡಬೇಕಾಗೇದ ಅಂದಿರಿ—ಅದ್ಯಾವ ವಿಷಯ ಅಂತ ? ಯಾಕಂದ್ರೆ, ಪಾಂಡಪ್ಪನೋರ ಕಡೆ ಅದ ನನ್ನ ಕೆಲಸ—

**ಬಿಂದೂರಾಯ** :— ಯಾವ ಅಪ್ಪನೋರೇ ಇರಲಿ—I am the father of the girl, ಮುಂದೂ ನನ್ನ ಮಗಳು—

**ಸುಬ್ಬಣ್ಣ** :— ( ಅಧೈರ್ಯದಿಂದ ) ಅಂದ್ರೆ ಯಾವ ವಿಷಯ ನೀವು ಹೇಳೋದು ?

**ಬಿಂದೂರಾಯ** :— ಯಾವುದೇನು ? The same old topic— ಅದೇ ಕತೆ—ನೀವು ಮಂದೂಗ ಹಾಂಗ ಪತ್ರ ಬರೀಬಾರದಾಗಿತ್ತು. That's not right, you see.

**ಸುಬ್ಬಣ್ಣ** :— ( ತಿಳಿಯದವನಂತೆ ) ಯಾವ ಪತ್ರ ?

**ಬಿಂದೂರಾಯ** :— ( ಬೇಜಾರದಿಂದ ) Don't act, man— ನಾಟಕಾ ಮಾಡಬ್ಯಾಡಿರಿ, ಇಲ್ಲಿ....ಕಾಲೇಜದ ಹುಡುಗರ್ಹಾಂಗ, ಅಂಥ ಪತ್ರ— College boys write love-letters, ಪ್ರೇಮಪತ್ರ ಕಾಲೇಜದ ಹುಡುಗರು ಬರೀಬೇಕು.

**ಸುಬ್ಬಣ್ಣ** :— ( ಪೆಚ್ಚಾಗಿ ) ಅಲ್ಲ—ಬರೆದದ್ದು ತಪ್ಪಾಯ್ತು ಅಂತ ಒಪ್ಕೊಂಡೀನಿ.

**ಬಿಂದೂರಾಯ** :— Nonsense ! ನಿಂ ಪ್ರೇಮ ಇದ್ರೆ ಇರ್ಬೇಕು, ನೀವು ಬರೆದಿರ್ಬೇಕು. She is a good girl—

**ಸುಬ್ಬಣ್ಣ** :— ( ತಿಳಿಯದೆ ) ತಪ್ಪು—ಬರೀಬಾರ್ದಾಗಿತ್ತು ಅಂದಿರಿ—

**ಬಿಂದೂರಾಯ** :— ( ಚಕಿತನಾದವನಂತೆ ) Yes. ಹೌದು I said it. ಅಂದೆ ನಾನು. ಯಾಕಂದ್ರೆ—ಇಷ್ಟು ಪರಿಚಯ ನಿಮ್ದು—ಬಾಯಿಂದ ಹೇಳ್ಬೇಕಾಗಿತ್ತು, You could have told it to her face—ಅದಕ್ಕೆ ಬರೆಯೋದು ತಪ್ಪು ಅಂದೆ—no, no, you should not write.

**ಸುಬ್ಬಣ್ಣ** :— ( ಮಾತು ಮುಗಿಸುವ ಹಂಚಿಕೆಯಿಂದ ) ತಪ್ಪು ಅಂತ ಒಪ್ಪಿದೆ ನಲ್ಲ, ಬಿಂದೂರಾಯರೆ, ಮಾತೇ ಮುಗೀತು ( ಯತ್ನಪೂರ್ವಕ ನಕ್ಕು ) ಇಷ್ಟಾಗಿಯೂ, ಅದು ಹಳೇ ಮಾತಾಯ್ತು. ಆ ಪ್ರೇಮಕ್ಕ ಪುರಸ್ಕಾರ ಸಿಗಲಿಲ್ಲ....ಹಹ !

**ಬಿಂದೂರಾಯ** :— ಹ್ಯಾಂಗ ಸಿಗ್ತದ ? How ? ಬರೆದ ಪತ್ರ ಮಂದಿ ನೋಡ್ತಾರ....ಮೇಲಾಗಿ, ಬರೆಯೋದು ನಿಂ ಕೆಲಸೇ ಅಲ್ಲ, You don't know how to write. . ಲೆಕ್ಚರ್ ಕೊಡೋ ರೂಢಿ, ಬಾಯಿಂದ್ಲೆ ಹೇಳ್ಬೇಕಾಗಿತ್ತು. ವಕೀಲ್ರು ಬ್ಯಾರೆ, ಮ್ಯಾಲೆ. Why don't you plead orally ?

**ಸುಬ್ಬಣ್ಣ** :— ( ಆಶೆಯ ದನಿಯಲ್ಲಿ ) ಅಂದ್ರೆ—ನಿಮಗ-ನಿಮಗ ಒಪ್ಪಿಗೆ ಇದೆ ?

ಬಿಂದೂರಾಯ :— ( ಒಮ್ಮೆಲೆ ) ನನಗೇನು ಸಂಬಂಧ ? ಛೆ ! It's no concern of mine—

ಸುಬ್ಬಣ್ಣ :— ಅಲ್ಲ—ನಿಮಗ ಯೋಗ್ಯ ಅನ್ನಿಸಿದ್ದರ—ನೀವೂ ಹೇಳಬಹುದು ಅವರಿಗೆ.

ಬಿಂದೂರಾಯ :— ಯಾರಿಗೆ ? ಮಂಡೂಗ ? I speak to Mandoo ! What nonsense ?

ಸುಬ್ಬಣ್ಣ :— ಅಲ್ಲ—ಅಂದ್ರೆ—ಅವರ ವಿಚಾರ ಒಂತುಸಾ—ವಿಕ್ಷಿಪ್ತ ಏನಲ್ಲ—ವಿಚಿತ್ರ ಕಾಣ್ತಾವ. ಅದಕ್ಕ ನೀವ್ ಹೇಳ್ತೀರೇನೊ ಅಂತ—

ಬಿಂದೂರಾಯ :— ( ಒಮ್ಮೆಲೆ ಜವ್ವಾಳಿ ತಟ್ಟಿ ಮನಃಪೂರ್ವಕ ನಕ್ಕು ) Good ! very, very good ! ಉತ್ಕೃಷ್ಟ—ಅಂದೆ ! ಹೌದಲ್ಲೊ ? ಆಕೆಯ ಬುದ್ಧಿ ಅಂದರೆ—It flashes—ಪ್ರತಿಭಾದ ಕಿಡಿ ಅವ ಅದು....ಹಹಹ !....Splendid ! ಉತ್ತಮ !

ಸುಬ್ಬಣ್ಣ :— ( ತುಸು ಸಿಡುಕಿನಿಂದ ) ಅಂದ್ರೆ, ಆ ವಿಚಾರಕ್ಕ ನಿಂ ಒಪ್ಪಿಗೆ ಇದೆ ಅಂತೇನು ?

ಬಿಂದೂರಾಯ :— ( ಒಮ್ಮೆಲೆ ) Oh, no ! ಒಪ್ಪಿಗೆ ಇಲ್ಲ—ಅಂದ್ರ ಒಪ್ಪಿಗೆ ಯಾಕ ಇರ್ಬೇಕು ಅಂತೀನಿ....There is no law that you should agree...ಕಾಯಿದೆ ಇದೆ ಏನು, ನೀವ್ರ ಒಪ್ಪಿದ ವಿಚಾರ್ಕ ಯೋಗ್ಯ ವಿಚಾರ ಅಂತ ! ಯಾರು ಒಪ್ಪಲಿ, ಬಿಡ್ಲಿ, ಯೋಗ್ಯ ವಿಚಾರ ಯೋಗ್ಯನೆ....Good in itself.. ಹಹ ( ಎಂದು ನಗುತ್ತ ಏಳುವನು )

ಸುಬ್ಬಣ್ಣ :— ( ತುಸು ಬಿರುಸು ಪಸಿಯುಲ್ಲಿ ) ಬಿಂದೂರಾಯರೆ—( ಬಿಂದೂರಾಯನು ತಡೆದು ನಿಲ್ಲುವನು ) ನೀವು ನನಗ ಕೇಳೋದು ಮುಗಿದಿದ್ದರೆ, ನನಗೂ ನಿಮಗೊಂದು ಪ್ರಶ್ನೆ ಕೇಳೋದಿದೆ.

ಬಿಂದೂರಾಯ :— ಇಷ್ಟೆ ಅಹುದಲ್ಲೊ ? Go on—ಆಗ್ಲಿ—Shoot. ( ಎಂದು ನಗೆಮೊಗದಿಂದ ಇದಿರಿಸಿ ನಿಲ್ಲುವನು )

ಸುಬ್ಬಣ್ಣ :— ( ತಾನೂ ಏಳುತ್ತ ) ಹೆಣ್ಮಕ್ಕಳು ಮದುವೆ ಮಾಡಿಕೊಳ್ಳಲೇಬೇಕು ಅಂತೀರೊ ಇಲ್ಲೊ ನೀವು ?

ಬಿಂದೂರಾಯ :— ( ಚಕಿತನಾದವನಂತೆ ) ಹೆಣ್ಮಕ್ಳು—ಏನು ?— What about women ?—repeat—ಏನಂದಿರಿ ?

**ಸುಬ್ಬಣ್ಣ** :— ( ತುಸು ಗಟ್ಟಿಯಾಗಿ, ಶಬ್ದಗಳನ್ನು ಬಿಡಿಬಿಡಿಸಿ, ಅದೇ ಮಾತನ್ನು ಮತ್ತೆ ಕೇಳುವನು )

**ಬಿಂದೂರಾಯ** :— What colossal nonsense! ಹುಚ್ಚುತನದ ಹಿಮಾಲಯ! ನನ್ನೇನು ಕೇಳ್ತೀರಿ. Ask women, ಹೆಣ್ಮಕ್ಕಳನ್ನ ಕೇಳಿರಿ ...

**ಸುಬ್ಬಣ್ಣ** :— ( ಸಿಟ್ಟನ್ನು ತಡೆಯುತ್ತ ) ನಿಮ್ಮ ಮಗಳನ್ನು ಕೇಳಿದೆ.

**ಬಿಂದೂರಾಯ** :— What did she say? ( ಆತುರತೆಯಿಂದ ) ಏನೇನೇನು ಅಂದಳು ಆಕೆ ?

**ಸುಬ್ಬಣ್ಣ** :—( ತಿರಸ್ಕಾರದ ದನಿಯಲ್ಲಿ ) ಮದುವೆ ಅಂದ್ರೆ ಎಲ್ಲ ಆಶೆ-ಆಕಾಂಕ್ಷೆಗಳ ಸಮಾಧಿ—

**ಬಿಂದೂರಾಯ** :— ( ಬೆರಗಾಗಿ ) What! ಏ—ನೂ—?

**ಸುಬ್ಬಣ್ಣ** :— ( ಮತ್ತೆ ಅದನ್ನೆ ಬಿಡಿಬಿಡಿಸಿ ಹೇಳುವನು )

**ಬಿಂದೂರಾಯ** :— ( ಸ್ವೀಕರಿಸಿದವನಂತೆ ) BEAUTIFUL!

**ಸುಬ್ಬಣ್ಣ** :— ( ಅಪಮಾನಿತನಾದವನಂತೆ ) ಏನಂದಿರಿ ?

**ಬಿಂದೂರಾಯ** :— ( ಅವನ ಕಡೆಗೆ ಲಕ್ಷ್ಯವಿಲ್ಲದವನಂತೆ ) Beautiful! ಅತ್ಯಂತ—ಹೃದಯಂಗಮ! ( ಒಮ್ಮೆಲೆ ಸುಬ್ಬಣ್ಣನಿಗೆ ) ಅದಕ್ಕೆ ನೀವು ಏನಂದಿರಿ—ಅಂ? What did you say? ಅಂ?....ಹಹ!

**ಸುಬ್ಬಣ್ಣ** :— ( ಸಿಟ್ಟಿನಿಂದ ) ಸಮಾಜಘಾತಕ ವಿಚಾರ ಅದು, ಅಂದೆ.

**ಬಿಂದೂರಾಯ** :— ( ಬೆರಗಾದವನಂತೆ ) ಏನು! I say, what a funny idea! ಎಂತಹ ಹುಚ್ಚು ವಿಚಾರ ಅಂತೀನಿ.

**ಸುಬ್ಬಣ್ಣ** :— ನೀವು ಬರಿಯ ಹುಚ್ಚು ವಿಚಾರ ಅಂತೀರಿ, ನಾನು ಸಮಾಜಘಾ—

**ಬಿಂದೂರಾಯ** :— ( ನಡುವೆಯೆ ) ಹುಚ್ಚುವಿಚಾರ ಅಂದದ್ದು ನಿಮ್ಮದಕ್ಕೆ. Your idea is stupid ಅಂದೆ....ಅದಕ್ಕೇ ನಾನು ಬರೆದೆ, ನಮಗೆ 'ಮನೋರಚನಾ' ಬೇಕು ಅಂತ, ( ಕೈಯೊಳಗಿನ ಪೇಪರ್ ಬಡೆಯುತ್ತ ) ಈ ಮೂರ್ಖ ಅದನ್ನ "ಪುನರ್ರಚನಾ" ಅಂತ ಛಾಪಿಸಿದ!

**ಸುಬ್ಬಣ್ಣ** :— ಇಂಥಾ ರೀತಿ ಮನಸ್ಸಿನ ರಚನಾ ಮಾಡಿದರೆ ಸಮಾಜ-ಘಾತಕ ಆಮು ಯಾಕೆ ಅನ್ನಬಾರದು ?

**ಬಿಂದೂರಾಯ** :— Oh yes. ಅನ್ನಿರ್ರಲ್ಲಿ—

**ಸುಬ್ಬಣ್ಣ** :— ( ಕೆಣಕುವವನಂತೆ ) ಅಂದ್ರೆ—ಹೆಣ್ಮಕ್ಕಳು ಮದಿವೀನೆ ಆಗ ಬಾರ್ದು ಅಂತ ನಿಮ್ದು ವಿಚಾರ ಅಹುದಲ್ಲೊ ?

**ಬಿಂದೂರಾಯ** :— ( ಬೇಜಾರದಿಂದ ) Why do you ask me ? ಮತ್ತೆ ನನ್ನ ಕೇಳ್ತೀರಲ್ಲ ?

**ಸುಬ್ಬಣ್ಣ** :— ( ಕ್ರಮೇಣ ಕೆರಳುತ್ತ ) ಈ ವಿಚಾರದಿಂದ ಹೆಣ್ಮಕ್ಕಳು ಮದಿವೀನೇ ಆಗ್ಲಿಲ್ಲ ಅಂದ್ರೆ ಪ್ರಪಂಚನೇ ಹಾಳಾದೀತಲ್ಲ—

**ಬಿಂದೂರಾಯ** :— ಆ ಕಾಳಜಿ ದೇವರಿಗೆ. Why should you bother ? ನಿಮಗ ಯಾಕ ಆ ಸಂಕಟ ಅಂತೀನಿ.

**ಸುಬ್ಬಣ್ಣ** :— ( ಸಿಟ್ಟು-ಪಟಿಗಳಿಂದ ) ಅದಕ್ಕೇ ಇಂಥಾ ಸಮಾಜಘಾತಕ ವಿಚಾರಕ್ಕ ತಡೆ ಹಾಕಲಿಕ್ಕೇ ಬೇಕು.

**ಬಿಂದೂರಾಯ** :— ( ತಣಿಕೆಯಿಂದ ) Good ! Good ! ಸರಕಾರ ನಿಮ್ಗ-ದಾಯ್ತು. ಇನ್ನು ಕಾಯಿದೆ ಪಾಸ್ಮಾಡಿರಿ.

**ಸುಬ್ಬಣ್ಣ** :— ( ಪಣ್ಣಾಪವನಂತೆ ) ಬಿಂದೂರಾಯರೆ, ಬಿಂದೂರಾಯರೆ, ಹೀಗೆ ಅಲಕ್ಷ್ಯ ಮಾಡೋ ವಿಷಯ ಅಲ್ಲ ಇದು. ಬುದ್ಧಿವಂತರು ನೀವು. ಬರೆದು ನಾಲ್ಕು ಜನರ ಮ್ಯಾಲೆ ಪ್ರಭಾವ ಬೀರುವವರು ನೀವು. ನಿಮ್ಮಂಥವರಿಂದ ಕಲಿತು ಇಡಿಯ ಸಮಾಜದ ಹೆಣ್ಮಕ್ಕಳು ಈ ವಿಚಾರ ಆಚರಣೆಯೊಳಗ ತಂದರೆ—

**ಬಿಂದೂರಾಯ** :— ( ಏನ್ಮೆಂತ ತಿರಸ್ಕಾರದಿಂದ ) What a silly idea ! ಎಂತಹ ದಡ್ಡತನ ಅಂತೀನಿ ! ಅವ ಕ್ರೈಸ್ತ ಬಂದ, ಇವ ಬುದ್ಧ ಆದ, ಈಗ ಗಾಂಧಿ ಬಂದುಹೋದ, love your neighbour, ಮಗ್ಗುಲ-ದವರ್ನ ಪ್ರೀತಿಸಿರಿ ಅಂದ್ರ....ಎಲ್ಲಾರೂ ಹಾಗೇ ಮಾಡಿದರೆ—ಆದರೆ, do they do it ? ಎಲ್ಲಾರೂ ಹಾಗೇ ಮಾಡ್ತೀರೇನು ? ( ಸುಬ್ಬಣ್ಣನು ನಿರ್ವಿಣ್ಣನಂತೆ ಸೋಫಾದಲ್ಲಿ ಕುಕ್ಕರಿಸುವುದನ್ನು ನೋಡಿ, ಕನಿಕರದಿಂದ ) I say, Subbanna, don't worry— ( ಬೆನ್ನು ಚಪ್ಪರಿಸುತ್ತ )

ಮನಸ್ಸಿಗೆ ಹಚ್ಕೋಬ್ಯಾಡಿರಿ ಅಂವೆ.. ( ಸುಬ್ಬಣ್ಣನು ವಿಷಾದದಿಂದ ತಲೆ ಅಲ್ಲಾಡಿಸಲು ) Your mind should be re-constructed, ನಾನು ಇಲ್ಲಿ ಬರೆಧಾಂಗ ನಿಮ್ಮ ಮನೋರಚನಾ ಆದರೆ—( ಒಮ್ಮೆಲೆ) ಆವರೆ ಈ ಮೂರ್ಖ ಅದನ್ನ "ಪುನರ್ರಚನಾ" ಅಂತ ಛಾಪಿಸಿ ಬಿಟ್ಟಾನ ! ಅವಾರ್ಥ ! Serious mistake ! ಅವನಿಗೆ ಈಗಿಂದೀಗ ಬರೆಪೇ ಬಿಡ್ತೀನಿ, I must ( ಎನ್ನುತ್ತ ಬಾಗಿಲಿನಿಂದ—ಬೇರೆ ಯಾವು-ದಕ್ಕೂ ಲಕ್ಷ್ಯವಿಲ್ಲದವನಂತೆ ಹೋಗಿಬಿಡುವನು. )

[ ಸುಬ್ಬಣ್ಣನು ದಂಗುಬಡಿದವನಂತೆ ಕುರ್ಚಿಯಲ್ಲಿಯೆ ದುಸ್ವಪ್ನದಿಂದ ಕೂತಿರುವನು. ಇಷ್ಟರಲ್ಲಿ ತುದಿಗಾಲುಗಳ ಮೇಲೆ ಮೆಲ್ಲಗೆ ಹೆಜ್ಜೆಯಿಡುತ್ತ ಚೆನ್ನನು ಬರುವನು. ಸುಬ್ಬಣ್ಣನ ಲಕ್ಷ್ಯ ಅವನ ಕಡೆಗೆ ಇಲ್ಲ. ಚೆನ್ನನು ಕೋಣೆಯೊಳಗೆ ೧-೨ ಹೆಜ್ಜೆ ನಡೆದೂ ಒಂದು ಸುಬ್ಬಣ್ಣನ ಲಕ್ಷ್ಯವಿಲ್ಲ [illegible] ತಿರುಗಿಬಿಡುವನು. ಅಷ್ಟರಲ್ಲಿ— ]

**ಸುಬ್ಬಣ್ಣ** :—( ಎಚ್ಚೆತ್ತವನಂತೆ ) ಯಾರು ?

**ಚೆನ್ನ** :— ( ನಿರುಪಾಯನಾಗಿ ಬಡಿದು ) ನಾನ್ರೀ-ರಿ

**ಸುಬ್ಬಣ್ಣ** :— ಯಾಕೆ—

**ಚೆನ್ನ** :— ( ನಡುಗುತ್ತ ) ಯಾಕಿಲ್ರಿ.... ಕುಂತೀರಿಲ್ಲೊ— ನೋಡಾಕ ಬಂದಿದ್ನಿ-ರಿ....ದೊಡ್ಡಜ್ಜನೋರು—

**ಸುಬ್ಬಣ್ಣ** :— ( ಒಮ್ಮೆಲೆ ) ಬಂದ್ರೇನು ?

**ಚೆನ್ನ** :— ಇಲ್ರಿ—ಅನಂತಪ್ಪನ ಜೋಡಿ ಮಾತಾಡಲಾಕ ಹತ್ತಿದ್ದರಿ— ಇಲ್ಲೇ ಬರ್ತಾರೇನೊ ಅಂತ ನೋಡಾಕ ಬಂದಿನ್ರಿ—

[ ಒಳಗಿನಿಂದ "ಚೆನ್ನ-ಚೆನ್ನ" ಎಂದು ಅಜ್ಜನ ದನಿ ]

**ಚೆನ್ನ** :— ( ಬಾಗಿಲಿಗೆ ಬಂದು ಅರ್ಧ ಹೊರಗೆ ನೋಡುತ್ತ ) ಬಂದಿನ್ರಿ....ಇಲ್ಲಿ ಕುಂತುಗೋಳಾಕ ಹೇಳೀನ್ರಿ—ಕುಂತಾರ್ರಿ—( ಎಂದು ಸುಬ್ಬಣ್ಣನ ಕಡೆ ಗೊಮ್ಮ ನೋಡಿ, ಮತ್ತೆ ಹೊರಗೆ ನೋಡುತ್ತ ) ಹೂನ್ರಿ ( ಎಂದು ಹೋಗುವನು. )

[ ಇಷ್ಟರಲ್ಲಿ ಅನಂತನು ಬರುವನು. ಕೈಯಲ್ಲಿ ಒಂದು ಸಾಸರು-ಒಂದು ಕಪ್ ]

**ಅನಂತ** :—( ಒಣ ನಗೆಯಿಂದ ) ನಾನು ಮ್ಯಾಲಿನ ಕೋಣೆಗೆ ಹೋದೆ, ನೀವು ಅಲ್ಲಿಯೆ ಇದ್ದೀರಿ ಅಂತ— ( ಎನ್ನುತ್ತ ಚಹದ ಕಪ್ಪನ್ನು ಕೊಡುವನು. )

**ಸುಬ್ಬಣ್ಣ** :— ( ಅದನ್ನು ತೆಗೆದುಕೊಂಡು ) ಇಲ್ಲ, ಪಾಂಡಪ್ಪನೋರ ಕಚ್ಚೇರಿ ಮೊದಲು ಕೆಲಸ ಇತ್ತು ಅಂತ ಇಲ್ಲಿಯೆ ಬಂದೆ, ಅವರು ಇಲ್ಲಿಯೆ ಇರ್ತಾರಂತ—( ಜಪ ಕುಡಿಯುವನು )

**ಅನಂತ** :— ಹಾಗ ಕೇಳಿದರ ಇಷ್ಟೊತ್ತಿಗೆ ಇಲ್ಲಿಯೆ ಇರತಿದ್ರು....ಆದ್ರೆ— ( ಒಮ್ಮೆಲೆ ತಡೆದು ) ನೀವು ಮ್ಯಾಲಿನ ಕೋಣೆಗೆ ಹೋಗಿಯೆ ಇಲ್ಲೇನು?

**ಸುಬ್ಬಣ್ಣ** :— ಇಲ್ಲ... ಯಾಕೆ ?....( ಜಪ ಕುಡಿಯುವನು )

**ಅನಂತ** :— ( ತುಸು ಚಿಂತಾವ ಬೆರೆಸಿದ ದನಿಯಲ್ಲಿ ) ಮಂದಾಕಿನೀ ಅವರಿಗೆ ನಿನ್ನೆ ರಾತ್ರಿ—ಏಕಾಏಕಿ ಜಡ್ಡು ಆಯ್ತು—

**ಸುಬ್ಬಣ್ಣ** :— ( ಕೂದಲಿ ಕಪ್ಪನ್ನು ಮಂಡುಮೇಜಿನ ಮೇಲಿಡುತ್ತ ) ಜಡ್ಡು ? ಏನು ? ಏನಾಗಿದೆ ? ಇಷ್ಟೊತ್ತು ಬಿಂದೂರಾಯರು ಇಲ್ಲಿಯೆ ಇದ್ದರು. ಹೇಳಲೇ ಇಲ್ಲ ಅಲ್ಲ—

**ಅನಂತ** :— ( ನಕ್ಕು ) ಬಿಂದೂರಾಯರ ಸ್ವಭಾವ ! ಅವರಿಗೆ ಗೊತ್ತಾದರೂ ಅದನೊ ಇಲ್ಲೊ ? ನನಗೂ ಗೊತ್ತಾಗತಿದ್ದಿಲ್ಲ. ಆದ್ರೆ, ರಾತ್ರಿ ಅಜ್ಜ ನೋರು " ಕಾಫಿ ಮಾಡಿಕೊಡು, ಅನಂತಾ " ಅಂತ ಎಚ್ಚರ ಮಾಡಿ- ದರು. ನನ್ನ....ನನಗೂ ಆಶ್ಚರ್ಯ ಆಯ್ತು. ಅದಕ್ಕೇ ಅವರು ಹೇಳಿದರು— " ಸ್ಟ್ರಾಂಗ್—ಗಟ್ಟ್ಯಾಗಿ—ಕಾಫಿ ಮಾಡಿಕೊಡು.... ನನ್ನಂತಹ ಮುದುಕಗಲ್ಲ ಮತ್ತೆ....ಮಂದಾಕಿನಿಗೆ " ಅಂದ್ರು. ಆಗ ನನಗ ತಿಳೀತು.... ( ಮೇಜಿನ ಮೇಲಿನ ಕಪ್ಪನ್ನು ನೋಡಿ ) ಚಹ ಅರ್ಥವೇನೋ—

**ಸುಬ್ಬಣ್ಣ** :— ( ಆ ಕಪ್ಪನ್ನು ಮತ್ತೆ ತೆಗೆದುಕೊಂಡು ) ಡಾಕ್ಟರ ಯಾರಾದ್ರೂ ಬಂದುಹೋದವರೇನು ? ( ಜಪವನ್ನು ಕುಡಿಯುವನು )

**ಅನಂತ** :— ( ಸಂತೈಸುವವನಂತೆ ) ಛೆ ! ಅಷ್ಟೇನು ಹೆದರೋಹಾಂಗ ಇರ- ಲಿಲ್ಲ....ನನಗೂ ಹೀಂಗೇ ಅಜ್ಜನೋರ ಮಾತಿನಿಂದೇ ತಿಳೀತು.... ರಾತ್ರಿ ಏನೊ ಕೆಟ್ಟ ಕನಸು ಕಂಡು ಹೆದರಿ ಚೀರಿದರಂತ, ಅಜ್ಜ ಅವರು ಹೋದ ಮ್ಯಾಲೆ ಅವರು—ಅಜ್ಜ ಅವರು—ಬೆಳ್ಳಂಬೆಳತನಕ ಅಲ್ಲಿಯೆ ಇದ್ದರಂತೆ—ಹಾಗ ಕೇಳಿದರ ಈಗ ಇಲ್ಲಿ ಬರಬಹುದು.

**ಸುಬ್ಬಣ್ಣ** :— ಅವರದೇ ಹಾದೀ ನೋಡ್ತಾ ಇದ್ದೀನಿ.... ( ಚಹ ಮುಗಿಯುವುದು )

**ಅನಂತ** :— ಅಂದ್ರೆ ಮ್ಯಾಲೇ ಹೋಗ್ತೀರೇನು—?

**ಸುಬ್ಬಣ್ಣ** :— ಅಲ್ಲಲ್ಲ, ಪಾಂಡಪ್ಪನೋರ ಹಾದೀ ನೋಡ್ತಾ ಇದ್ದೀನಿ. ( ಕಪ್ಪನ್ನು ಮೇಜಿನ ಮೇಲಿಡುವನು ) " ಈಗ ಇಲ್ಲಿ ಬರಬಹುದು " ಅಂದಿ, ಅಪಕ್ಕ ಹೇಳಿದೆ—

**ಅನಂತ** :— ( ಕಪ್ಪನ್ನು ಎತ್ತಿಕೊಂಡು ) " ಈಗ ಇಲ್ಲಿ ಬರಬಹುದು " ಅಂದ್ರೆ ಮಂದಾಕಿನಿಯವರೆ ಬರಬಹುದು—ಅಂದೆ ...

**ಸುಬ್ಬಣ್ಣ** :— ಛೆ ! ಅವರಿಗ್ಯಾಕ ತ್ರಾಸ—

**ಅನಂತ** :— ( ಹೊರಡುತ್ತ ) ಅದಕ್ಕೇ ಹೇಳಿದೆನಲ್ಲ—ಅಷ್ಟೇನು ಹೆಪರೋ ಹಾಂಗ ಜಡ್ಡಿಲ್ಲ ಅಂತ. ನಿಮಗ ಚಹ ಕೊಡ್ಬೇಕು ಅಂತ ಅಲ್ಲಿ ಹೋದಾಗ ಅವರೇ ಹೇಳಿದರು. " ಕೆಳಗ ಅಜ್ಜನೋರ ಕೋಣೇವಳ್ಗ ಇದ್ದಾರ ವಕೀಲ್ರು. ಅಲ್ಲಿಯೆ ಒಯ್ದು ಕೊಡು. ನಾನೂ ಬಂದೆ ಇಷ್ಟರೊಳಗ " ಅಂತ.

[ " ಚಹ ಕೊಟ್ಟೇನು, ಅನಂತಾ, ವಕೀಲ್ರಿಗೆ ? ಆಂ ? " ಎನ್ನುತ್ತ ಅಜ್ಜನು ಬರುವನು. ಅವನ ಪಸಿಯನ್ನು ಕೇಳಿದೊಡನೆ ಸುಬ್ಬಣ್ಣನು ತಟ್ಟನೆ ಎದ್ದು ನಿಲ್ಲುವನು. ]

ಕೊಟ್ಟೆ, ಆಯ್ತು. ( ಎಂದು ಅನಂತ ಬಾಗಿಲಿಗ ಬಂದು ಅಜ್ಜನಿಗೆ ದಾರಿ ಕೊಡಲು ಬದಿಗೆ ನಿಲ್ಲುವನು. ಅಜ್ಜನು ಅದೇ ಪ್ರಶ್ನೆಯನ್ನು ಮತ್ತೊಮ್ಮೆ ಕೇಳುತ್ತ ಒಳಗೆ ಬರುವನು. ಅನಂತನು ಹೋಗುವನು. )

**ಅಜ್ಜ** :— ಚಹ ಆಯ್ತು, ಸುಬ್ಬಣ್ಣ ? ( ನೋಡಿ ) ನಿಂತೀದಿ ಯಾಕ ? ಕೂತುಕೊ ...ಬಂದವ್ರಿಗೆ ಮೊದಲು ಕೂಡ್ಲಿಕ್ಕೆ ಹೇಳು ಅಂತ ಒಂದು ಸಾವಿರ ಸಲ ಹೇಳಿರಬೇಕು, ಆ ಶುಂಭಗ ! ಆಂ ? ಕೂತುಗೋ ಅಲ್ಲಿಯೆ....ನನ್ನ ಸಲುವಾಗಿ ಈ ಕುರ್ಚಿ....ಶಕ್ತಿ ಹೋದವರ ಸಿಂಹಾಸನ....ಅಂ ? ( ಎನ್ನುತ್ತ ಕುರ್ಚಿಯಲ್ಲಿ ಕೂಡುವನು. ಸುಬ್ಬಣ್ಣನು ಸೋಫಾದಲ್ಲಿಯೆ ಕೂಡುವನು. )

**ಸುಬ್ಬಣ್ಣ** :— ( ನಗೆಯಿಂದ ) ಇಷ್ಟೊತ್ತು ಕೂತುಗೊಂಡೇ ಇದ್ದೆ—

**ಅಜ್ಜ** :— (ನಡುವೆಯೆ) ಹೌದು, ಸುಬ್ಬಣ್ಣಾ, ನೀನು ಬಂದು ಬಹಳೊತ್ತು ಆಗಿರಬೇಕು, ಇಲ್ಲ? ಆಂ? ..ಆದ್ರೆ, ಏನ್ಮಾಡೋದು ಹೇಳು?.... ಕಲಿಯುಗದೊಳಗ ಸಂಸಾರ ಅಂದ್ರ ಹೀಂಗದ, ತಿರುವು–ಮುರುವು. (ಹುಂ—ಎಂದು ಉಸಿರೆಳೆಯುವನು. ಸುಬ್ಬಣ್ಣನು ಸುಮ್ಮನಿದ್ದುದನ್ನು ನೋಡಿ) ಆಂ?

**ಸುಬ್ಬಣ್ಣ** :— ಇದೇ ಈಗ ಅನಂತನೇ ಹೇಳ್ತಿದ್ದ, ಜಡ್ಡು ಆಯ್ತು ಒಮ್ಮೆಲೆ ಅಂತ—

**ಅಜ್ಜ** :— (ನಡುವೆಯೆ, ತಿರಸ್ಕಾರದ ದನಿಯಲ್ಲಿ) ಜಡ್ಡಲ್ಲ ಪಡ್ಡಲ್ಲ....ಅದೇ ಹೇಳಿದೆನಲ್ಲ ಕಲಿಯುಗದ ತಿರುವು–ಮುರುವು ಅಂತ?....ಆಂ?.... ಮಕ್ಕಳೂ ಮೊಮ್ಮಕ್ಕಳೂ ಮುಪ್ಪಿನೊಳಗ ಉಪಯೋಗ ಬೀಳಲಿ ಅಂತ ನಮ್ಮ ಹಟ; ಜೀವದ ಉಸಿರು ಇರೋತನಕ ಈ ಮುದುಕರು ತಮಗ ಉಪಯೋಗ ಬೀಳಲಿ ಅಂತ ಅವರ ಹಟ....ಏನಂತೀ?.... ಆಂ?

**ಸುಬ್ಬಣ್ಣ** :— (ಕೆಳಗ ನೋಡುತ್ತ) ನಾನು ಈ ಊರು ಬಿಡ್ಬೇಕು ಅಂತ ಮಾಡೀನಿ.

**ಅಜ್ಜ** :— (ಅವನನ್ನು ದಿಟ್ಟಿಸುತ್ತ) ಹುಂ?—

**ಸುಬ್ಬಣ್ಣ** :— (ಮುಲಿನಂತೆ) ಅದನ್ನ ನಿಮಗ ಹೇಳಲಿಕ್ಕ ಅಂತ ಬಂದೆ.

**ಅಜ್ಜ** :— (ಹಾಗೇ) ಹುಂಹುಂ—

**ಸುಬ್ಬಣ್ಣ** :— (ಮೊದಲಿನಂತೆ) ಇಷ್ಟೆ...

**ಅಜ್ಜ** :— ಹುಂ.

**ಸುಬ್ಬಣ್ಣ** :— (ಇನ್ನೂ ಹಾಗೆಯೇ) ಮತ್ತೇನೂ ಕೆಲಸ ಇದ್ದಿರಲಿಲ್ಲ, ಬರೀ ಇಷ್ಟು ಹೇಳಲಿಕ್ಕೆ ಅಂತ ಬಂದಿದ್ದೆ—ಇಷ್ಟೆ.

**ಅಜ್ಜ** :— (ಮಾತು ಮುಗಿಸುವ ದನಿಯಲ್ಲಿ) ಹುಂ.

**ಸುಬ್ಬಣ್ಣ** :— (ಏಳುತ್ತ) ಆಯಿತು, ಹಾಗಾದರ—

**ಅಜ್ಜ** :— (ಬೇಜಾರದಿಂದ ಎಳೆದು) ಹುಂ—

**ಸುಬ್ಬಣ್ಣ** :— ನಾನು ಹೊರಡ್ತೀನಿ ಹಾಗಾದರೆ—

**ಅಜ್ಜ** :— (ಹುಂ–ಎನ್ನುವುದರ ಬದಲು ಗಂಟಲು ಸರಿಪಡಿಸಿಕೊಳ್ಳುವನು.)

[ ಸುಬ್ಬಣ್ಣನು ಅಜ್ಜನನ್ನು ನೋಡದೆಯೆ ಮೆಲ್ಲಗೆ ಹೆಜ್ಜೆಗಳನ್ನಿಡುತ್ತ ಬಾಗಿಲ ಕಡೆಗೆ ನಡೆಯುವನು. ಅಷ್ಟರಲ್ಲಿ ಅಜ್ಜನು ಮತ್ತೊಮ್ಮೆ ಗಂಟಲು ಸರಿಪಡಿಸಿಕೊಳ್ಳಲು ಸುಬ್ಬಣ್ಣನು ತಟ್ಟನೆ ತಡೆದು, ಮುಖ ತಿರುಗಿಸಿ ಅಜ್ಜನನ್ನು ನೋಡುವನು. ಅಜ್ಜನು "ಏನೂ ಇಲ್ಲ" ಎಂದು ತಲೆ ಅಲ್ಲಾಡಿಸಲು ಮತ್ತೆ ಸುಬ್ಬಣ್ಣನು ಮುಂದ ಹೆಜ್ಜೆಯನ್ನಿಡುವನು. ]

**ಅಜ್ಜ :—** ಹುಂ— ( ಎಂದು ಉಸಿರೆಳೆಯಲು ಸುಬ್ಬಣ್ಣನು ಮತ್ತೆ ತಟ್ಟನೆ ತಡೆಯಲು ) ಸುಬ್ಬಣ್ಣಾ, ಹೋಗೋದಿದ್ದರೆ ಹೊರಡು—ಆ ?— ( ಸುಬ್ಬಣ್ಣನು ಹೊರಡಬೇಕೆನ್ನಲು ) ಅದ್ರೆ, ಹೊರಡುವಾಗ ಮುದುಕನಿಗೆ ಒಂದು ನಮಸ್ಕಾರ ಮಾಡುವುದು ಲೋಕಾಚಾರ. ( ಸುಬ್ಬಣ್ಣನು ತಿರುಗಿ ನಿಲ್ಲುವನು )

**ಸುಬ್ಬಣ್ಣ :—** ತಪ್ಪಿದೆ. ಕ್ಷಮಿಸಬೇಕು. ನಾ ಇನ್ನು ಹೋಗ್ತೀನಿ. ( ಕೈಮುಗಿಯುವನು )

**ಅಜ್ಜ :—** ಮತ್ತೂ ತಪ್ಪಿದಿ, ಸುಬ್ಬಣ್ಣಾ. ನಮಸ್ಕಾರ ಮಾಡುವಾಗ. ಹೋಗಿಬರ್‍ತೀನಿ ಅನ್ನಬೇಕು, ಬರೀ 'ಹೋಗ್ತೀನಿ' ಅಲ್ಲ

**ಸುಬ್ಬಣ್ಣ :—** ( ತಲೆ ಅಲ್ಲಾಡಿಸಿ ) ಇನ್ನು ಬರೋದು ಶಕ್ಯ ಇಲ್ಲ.

**ಅಜ್ಜ :—** ( ಹಿರಿತನದ ದನಿಯಲ್ಲಿ ) ಸುಬ್ಬಣ್ಣಾ, ಇಲ್ಲಿ ಬಾ....ಬಾ. ಇಲ್ಲಿ ( ಸುಬ್ಬಣ್ಣನು ಮುಂದೆ ನಡೆದುಬರಲು ) ಇಲ್ಲಿಂದ ಹೊರಡಲಿಕ್ಕೇ ನಿನ್ನ ಕಾಲು ಏಳಲೊಲ್ಲದು, ಅಂ ?—ಮತ್ತೆ ತಿರುಗಿ ಬರೋದೇ ಶಕ್ಯ ಇಲ್ಲ ಅಂತೀಯಲ್ಲ ? ಅಲ್ಲೊ, ಸುಬ್ಬಣ್ಣಾ, ನೀ ಇಲ್ಲಿಂದ ಹೋಗೋದು ಶಕ್ಯ ಇಲ್ಲ ಅಂತೀನಿ ನಾನು, ಏನಂತೀ, ಆ ?

**ಸುಬ್ಬಣ್ಣ :—** ( ತುಸು ಕೆಣಕಿದಂತಾಗಿ ) ಇಲ್ಲಿ ಇನ್ನು ಒಂದು ಕ್ಷಣ ನಿಲ್ಲೋದಿಲ್ಲ—

**ಅಜ್ಜ :—** ಖೊಟ್ಟಿ ದುಡ್ಡು ನೀನು, ಸುಬ್ಬಣ್ಣಾ....ನೀ ಎಷ್ಟು ಸಾರೆ ಜೇಲಿಗೆ ಹೋಗಿದ್ದಿ ?

**ಸುಬ್ಬಣ್ಣ :—** ( ಅನಿರೀಕ್ಷಿತ ಪ್ರಶ್ನೆಗಾಗಿ ಒಂದರೆಕ್ಷಣ ಚಕಿತನಾಗಿ, ಚೇತರಿಸಿಕೊಂಡು ) ನಾಲ್ಕು ಸಲ.

**ಅಜ್ಜ :—** ನೋಡಿದಿಲ್ಲೊ ! ಗಟ್ಟಿಮುಟ್ಟ ಕಾವಲು-ಕೀಲಿ ಇಟ್ಟ ಜೇಲಿಗೆ ನಾಲ್ಕು ಸಲ ಹೋದ್ರೂ ತಿರುಗಿ ಬಂದೆ ! ಖೊಟ್ಟಿ ದುಡ್ಡೊ,

ಸುಬ್ಬಣ್ಣಾ, ನೀನು. (ಎದ್ದು ಅವನ ಹತ್ತಿರ ಬಂದು ಅವನ ಬೆನ್ನಮೇಲೆ ಕೈಯಿಟ್ಟು) ನೀನು ಯಾಕ ಊರು ಬಿಟ್ಟು ಹೊರಡುವಿ, ನನಗ ಗೊತ್ತಿದೆ....ಅಷ್ಟು ಹಟ ಇದ್ದರ ಹೋದೀಯಂತೆ ನೀನು....ಆದ್ರೆ, ಒಂದು ನಾಲ್ಕು ಮಾತನಾದರೂ ಆಡ್ತೀ ಇಲ್ಲೊ ಈ ಮುದುಕನ ಜೋಡಿ ? (ಸುಬ್ಬಣ್ಣನು ಅನುಮಾನಿಸಲು ಅವನ ಕೈಹಿಡಿದುಕೊಂಡು ಕುರ್ಚಿಯ ಕಡೆಗೆ ನಡೆಯುತ್ತ) ಮುಪ್ಪಿನ ಚಟ, ಪ್ರಶ್ನೆ ಕೇಳೋದು, ಕೇಳ್ತೀನಿ; ಹಿರಿತನ ಹಚ್ಚಿಕೊಳ್ಳೋದು, ಹಚ್ಚಿಕೋತೀನಿ (ಎನ್ನುತ್ತ ಅವನನ್ನು ಕುರ್ಚಿಯಲ್ಲಿ ಕೂಡ್ರಿಸಿ ತಾನು ಹಾಗೇ ಮಂಚದ ಕಡೆಗೆ ನಡೆಯುತ್ತ) ಜೇಲಿಗೆ ಎಷ್ಟು ಸಾರೆ ಹೋಗಿದ್ದಿ—(ಒಮ್ಮೆಲೆ ಸುಧಾರಿಸಿಕೊಂಡಂತೆ ಮಾಡಿ) ಆ ಪ್ರಶ್ನೆ ಕೇಳೀನಲ್ಲ ಈಗ, ಆಂ ? (ಎನ್ನುತ್ತ ತಿರುಗಿ ನಿಲ್ಲುವನು. ಒಂದು ನಿಮಿಷ ಸುಬ್ಬಣ್ಣನನ್ನು ದಿಟ್ಟಿಸುವನು. ಅವನು ಕೊನೆಗೆ ತನಗೆ ಮುಖ ಮಾಡಲು ಮುಗುಳ್ನಗೆಯಿಂದ ನಡೆದು ಬಂದು ಸೋಫಾದ ಮೇಲೆ ಕುಳಿತುಕೊಂಡು) ಸುಬ್ಬಣ್ಣಾ, ಮ್ಯಾಲೆ ನೋಡು ನೀನು. ನಾ ಮುದುಕ ಆಗೀನಿ ಅಂತ ಹೇಳಿದೆನಲ್ಲ, ಆಂ ? ನೀ ಮ್ಯಾಲೆ ನೋಡಲಿಲ್ಲ ಅಂದ್ರೆ ನಾ ಯಾರಿಗೆ ಪ್ರಶ್ನೆ ಕೇಳ್ತೀನಿ ಅಂಬೋದೇ ಮರೆತುಹೋದೀತು ನನಗ. (ಸುಬ್ಬಣ್ಣನು ಅನಿವಾರ್ಯ-ವಾಗಿ ಮುಖವನ್ನೆತ್ತಿ ತನ್ನನ್ನು ನೋಡಲು, ದೃಷ್ಟಿಯಿಂದ ಅವನನ್ನು ಪರೀಕ್ಷಿಸಿದಂತೆ ಮಾಡಿ, "ಏನೂ ದುಃಖವಿಲ್ಲ" ಎಂದು ಸೂಚಿಸುವವನಂತೆ ತುಟಿ ಬಿಗಿಯಿಸಿ ತಲೆ ಅಲ್ಲಾಡಿಸುವನು. ಕೊನೆಗೆ ಸುಬ್ಬಣ್ಣನಿಗೆ ಮುಗುಳ್ನಗೆ ಅನಿವಾರ್ಯವಾಗಿ—)

**ಸುಬ್ಬಣ್ಣ** :— ಏನು ಕೇಳೋದಿದೆ ನಿಮಗ ಕೇಳಿಬಿಡಿರಿ.

**ಅಜ್ಜ** :— ನೀನು ನಾಲ್ಕು ಸಾರೆ ಜೇಲಿಗೆ ಹೋಗಿದ್ದಿ ಅಂತ ಹೇಳಿದಿ, ಅಲ್ಲ? ಆಂ ? ನಾಲ್ಕೂ ಸಾರೆ ಚಳವಳಿ—ಅಂದ್ರೆ ಗಾಂಧಿ ಚಳವಳಿ—ಯೊಳಗೇ ಜೇಲಿಗೆ ಹೋದಿ ಏನು ?

**ಸುಬ್ಬಣ್ಣ** :— (ಇದೇನು ಮೋಜು ಎಂಬಂತೆ ನಗೆಮೊಗದಿಂದ) ಅಹುದು.

**ಅಜ್ಜ** :— ಚಳವಳಿ ಜೋರಿಗೆ ಒಂದಾಗ ಹೋಗತಿದ್ದೆಯೊ—ಏನು ಸುರು-ವಿಗೊ ? ಆಂ ?

**ಸುಬ್ಬಣ್ಣ** :— ಅಲ್ಲ—ಅಂದ್ರೆ—ಪ್ರಶ್ನೆಯ ಸಂದರ್ಭ ತಿಳೀಲಿಲ್ಲ ನನಗೆ.

**ಅಜ್ಜ** :— (ಪಟದ ದನಿಯಲ್ಲಿ) ಅಲ್ಲೊ, ಸುಬ್ಬಣ್ಣಾ, ನಿಂ ಕಾಂಗ್ರೆಸದೊಳಗ ಇದೊಂದು ಪದ್ಧತಿ ಇರಲಿಲ್ಲೇನು ? ಕೆಲವು ಮಂದಿ ಮುಂಚೆ ಜೇಲಿಗೆ ಹೋಗಿಯೆ ಬಿಡತಿದ್ದರು ; ಆ ಮ್ಯಾಲೆ ದಂಗೆ, ಲಾಠಿ. ಗುಂಡು ಇದಾಗಿ ಮತ್ತೆ ಕೆಲವರು ಜೇಲಿಗೆ ಹೋಗ್ತಿದ್ದರು—

**ಸುಬ್ಬಣ್ಣ** :— (ನಡುವೆಯೆ) ಅದಕ್ಕ ಯಾರೇನು ಮಾಡೋದು ? ಮುಂದಾಳುಗಳನ್ನ ಮುಂಚೆ ಹಿಡಿದುಬಿಡತಿದ್ದರು ಸರಕಾರದವರು

**ಅಜ್ಜ** :— ಹಾಂ—ನಾನು ಕೇಳಿದ್ದೂ ಅದೇ. ಜೇಲಿಗೆ ಹೋಗೋದರಾಗ ನೀ ಮುಂದಾಳು ಆಗಿದ್ದೆಯೊ—ಏನು—ಅಂ ?

**ಸುಬ್ಬಣ್ಣ** :— (ಅಭಿಮಾನದಿಂದ) ಯಾವಾಗಲೂ ನನ್ನ ಮೊದಲೇ ಹಿಡೀತಿದ್ದರು—

**ಅಜ್ಜ** :— (ಒಮ್ಮೆಲೆ ಚಪ್ಪಾಳೆ ತಟ್ಟಿ) ಹಾಂಹಾಂ ! ಅದಕೇ ನೋಡು ನೀನೀಗ ಊರು ಬಿಟ್ಟು ಹೊರಟಿದ್ದು....ಅಂ ?

**ಸುಬ್ಬಣ್ಣ** :— (ಚಕಿತನಾಗಿ) ಏನು ? ಏನಂದಿರಿ ? ಛೆ ! ಎಲ್ಲಿಂದೆಲ್ಲಿಗೆ—

**ಅಜ್ಜ** :— (ನಡುವೆಯೆ) ಅಲ್ಲಿಂದ—ಇಲ್ಲಿಗೆ, ತಿಳೀತೇನು, ಸುಬ್ಬಣ್ಣಾ, ಅಂ ?....ಅಲ್ಲಿಂದ ಸರಳ ಇಲ್ಲಿಗೆ ಅಂದೆ...ಮೊದಲು ಜೇಲಿಗೆ ಹೋಗುವವ ನೀನು....ದಂಗೆ, ಕೊಲೆ, ಕೊಳ್ಳಿ, ಲಾಠಿ, ಗುಂಡು— ಇದೊಂದರದೂ ಪ್ರತ್ಯಕ್ಷ ಅನುಭವ ನಿನಗಿಲ್ಲ. ಸುಬ್ಬಣ್ಣಾ, ನಿನಗ ಆ ಅನುಭವ ಇಲ್ಲ, ಅದಕೇ ನೀನು ಜೇಲಿಗೆ ಹೋದರೂ ಗಟ್ಟಿ-ಯಾಗಲಿಲ್ಲ—

**ಸುಬ್ಬಣ್ಣ** :— (ಕೆರಳಿ) ಜೇಲಿನೊಳಗ ಎಂತಹ ಯಾತನಾ—

**ಅಜ್ಜ** :— (ನಡುವೆಯೆ) ಅದನ್ನ ಯಾರು ನೋಡ್ಲಿಕ್ಕೆ ಬಂದಾರ, ಸುಬ್ಬಣ್ಣಾ ? ಇದಲ್ಲದೆ, ನೀನು ಜೇಲಿಗೆ ಹೋಗೋದನ್ನ ಶುರೂ ಮಾಡಿದಾಗ ಗಾಂಧಿಯ ಚಳವಳದ್ದು ಒಂದು ಯುಗ ಮುಗಿದಿತ್ತು. ಒಟ್ಟು ಏನು ? ನನ್ನ ಮಾತು ಕೇಳು, ಸುಬ್ಬಣ್ಣಾ. ನೀನು—ನೀನು, ಅಳುಬುರುಕ ಗಂಡಸು. ಅಂ ?

**ಸುಬ್ಬಣ್ಣ** :— (ಸಂತಾಪದಿಂದ) ಈ ಮಾತನ್ನು ಮತ್ತೆ ಯಾರಾದರೂ ನುಡಿದಿದ್ದರೆ—

**ಅಜ್ಜ** :— (ನಡುವೆಯೆ) ಮತ್ತೆ ಯಾರಾದರೂ ಯಾಕೆ? ಈ ಮಾತು ಮತ್ತೆ ಎಲ್ಲಿಯಾದರೂ ನಡೆದಿದ್ದರೆ ನಾನೇ ವಿಶ್ವಾಸ ಇಡತಿದ್ದಿಲ್ಲ. ಆದರೆ, ನನ್ನ ಕಣ್ಣೆದುರು, ನನ್ನ ಮನೆಯೊಳಗ, ನನ್ನ ಮೊಮ್ಮಗಳು ನಿನ್ನ ಮದುವೆ ಆಗ್ಲಿಕ್ಕೆ ಒಲ್ಲೆ ಅಂದಳು ಅಂತ ಜೋಲುಮೋರಿ ಹಾಕಿ ಊರು ಬಿಟ್ಟು ಓಡಿಹೋಗಲಿಕ್ಕೆ ನಿಂತ ಗಂಡಸು ನೀನು— (ಉಸಿರಿಗಾಗಿ ತಡೆದು) ಉಸಿರ ಸಾಲೋದಿಲ್ಲ ಮುದುಕನದು ಅಂತ ತಡೀತೀನಿ, ನನ್ನ ಸಿಟ್ಟು ಇಷ್ಟಕ್ಕೇ ಮುಗಿಯಿತು ಅಂತ ತಿಳೀಬ್ಯಾಡ. ಏನು? ಸುಬ್ಬಣ್ಣಾ, ಆಂ?

**ಸುಬ್ಬಣ್ಣ** :— (ಸ್ವಾಭಿಮಾನದಿಂದ) ನಾನು ಯಾಕೆ ಹೋಗ್ತೀನಿ ಅನ್ನೋದು ನಿಮಗ ತಿಳಿದಿದ್ದರೆ—

**ಅಜ್ಜ** :— (ನಡುವೆಯೆ) ಸುಬ್ಬಣ್ಣಾ, ನೀನು ವಕೀಲ ಇದ್ದಿ. ನನಗೊತ್ತಿಲ್ಲ ಅಂತೀ ಏನು? ಒಂದಿನಿಂದ ನೀ ಎಷ್ಟು ಚಂದ ಚಂದ ಕಾರಣ ಹುಡುಕಿ ಹೇಳಿದರೂ—ಉಹುಂ (ಎಂದು ತಲೆ ಅಲ್ಲಾಡಿಸುತ್ತ ಏಳು-ವನು. ಮತ್ತೆ ತನ್ನ ಮಂಚದ ಕಡೆಗೆ ನಡೆದು—ಮಂಚದ ಹತ್ತಿರ ತಿರುಗಿ ನಿಂತು) ಒಂದಾನೊಂದು ಕಾಲದೊಳಗ ಹೆಂಗಸಿನ್ನ ಹೆಡಮುರಿಗೆ ಕಟ್ಟಿ ತಂದು ಮದುವೆ ಮಾಡಿಕೋತಿದ್ದರಂತ. (ಮುಗುಳ್ನಗೆಯಿಂದ) ಹೋಗಲಿ ಬಿಡ, ಅದು ಕಾಡು ಜನರ ಸಂಸ್ಕೃತಿ ಅಂತ ತಿಳಿದರೆ.... ಸುಬ್ಬಣ್ಣಾ, ಒಂದು ಮಾತು ನಿನಗ ಹೇಳ್ತೀನಿ....ಹೆಂಗಸಿನ್ನ ಹ್ಯಾಂಗ ಒಲಿಸಿಗೋತಾನ ಗಂಡಸು ಅದರ ಮ್ಯಾಲೆ ಆ ಯುಗದ ಸಂಸ್ಕೃತಿ ಅವಲಂಬಿಸೇದ ನೋಡು. (ಮಂಚದ ಮೇಲೆ ಕೂಡ್ರುತ್ತ) ಶ್ರಮ ಆಯ್ತು; ಆದ್ರೂ ಮಾತಾಡ್ಬೇಕೂ ಅಂತ ಅನ್ನಿಸತದ. ಮುದುಕಗ ಇದು ಕೆಟ್ಟ ಲಕ್ಷಣ, ಸುಬ್ಬಣ್ಣಾ. (ನಕ್ಕು) ನಂ ವ್ಯಾಳ್ಯಾಕ ನಾವು ಹಿರೇರ ಜೋಡಿ ಹೋಗ್ತಿದ್ದಿವಿ ಊರೂರು, ಕನ್ಯಾ ನೋಡ್ಲಿಕ್ಕೆ ಅಂತ....ಅದೇ ನಂ ಬಿಂದೂನ ವ್ಯಾಳ್ಯೇಕ್ಕ ಅವರು ಊರೂರು ತಿರುಗತಿದ್ದರು, ವರ ನೋಡ್ಲಿಕ್ಕೆ ಅಂತ....ಈಗ?....ಈಗ ನಾನು ಊರೂರು ಅಲೆದಾಡ್ಬೇಕಂತೀಯೇನು, ಓಡಿ ಹೋಗೋ ವರನ್ನ ತಂದು ಕನ್ಯಾಗ ಕೂಡಿಸಲಿಕ್ಕೆ? ಆಂ?

**ಸುಬ್ಬಣ್ಣ** :— ( ಸಿಡುಕಿನ ದನಿಯಲ್ಲಿ ) ಇಲ್ಲಿ ಏನು ಸಂಬಂಧ ವರದ್ದೂ ಕನ್ಯಾದ್ದೂ ?.... ಯಾವ ವರಾನೂ ಇಲ್ಲ. ಯಾರಿಗೆ ಕನ್ಯಾನೂ ಬೇಕಿಲ್ಲ....

**ಅಜ್ಜ** :— ( ಕೆಣಕುವ ದನಿಯಲ್ಲಿ ) ಅಷ್ಟು ಗಟ್ಟಿಮುಟ್ಟಿ ಹೇಳಿದರೇನೊ, ಸುಬ್ಬಣ್ಣಾ, ಮಂದೂ ನಿನಗ ?

**ಸುಬ್ಬಣ್ಣ** :— ( ಕಸಲಿ ) ಯಾರು ಹೇಳೋದು ? ಯಾರು ಹೇಳೋ ಕಾರಣಾನೇ ಇಲ್ಲ. ( ಎದ್ದು ) ಮೊದಲು ನನ್ದೆ ಮನಸ್ಸಿಲ್ಲ ಈ ಮದುವೆಗೆ.

**ಅಜ್ಜ** :— ( ಅತ್ಯಂತ ಚಕಿತನಾಗಿ ) ಏನು ? ಏನಂದೆ ?

**ಸುಬ್ಬಣ್ಣ** :— ( ಆವೇಶವನ್ನು ಇದಿರಿಸಿ, ದನಿ ಎತ್ತರಿಸಿ ) ನನ್ದೆ ಮನಸ್ಸು ಇಲ್ಲ, ಇಲ್ಲ ಅಂದೆ, ಈ ಮದುವೆಗೆ.

**ಅಜ್ಜ** :— ( ಒಂದೊಂದೆ ಹೆಜ್ಜೆಯನ್ನಿಡುತ್ತ ಮುಂದೆ ಬರುತ್ತ ) ಮನಸ್ಸಿಲ್ಲ ? ( ಸುಬ್ಬಣ್ಣನು ತಲೆ ಅಲ್ಲಾಡಿಸುವನು ) ನಿನ್ದೆ ಮನಸ್ಸಿಲ್ಲ ?... ( ಒಮ್ಮೆಗೆ ) ಹಾಗಾದ್ರೆ, ಅಂಥಾ ಪತ್ರ ಯಾಕೆ ಬರೆದೆ ನೀನು ಮಂದೂಗ ? ಯಾಕೆ-ಯಾಕ್—( ಸಿಟ್ಟಿನಿಂದ ಉಸಿರು ಸಾಲದಂತಾಗುವುದು. )

**ಸುಬ್ಬಣ್ಣ** :— ( ತುಸು ಗಾಬರಿಯಾಗಿ ತತ್ತರಿಸುತ್ತ ) ಯಾಕೆ ? ಯಾಕೆ— ಯಾಕಂದ್ರೆ—

[ " ಯಾಕೆ ಅಂದ್ರೆ—ನಾನು ಹೇಳ್ತೀನಿ " ಎನ್ನುತ್ತ ಮಂದಾಕಿನಿಯು ಬರುವಳು. ಆಕೆ ಬಂದೊಡನೆ ಅಜ್ಜನು ನಿಸ್ತ್ರಾಣನಂತೆ ಸೋಫಾದಲ್ಲಿ ಕುಕ್ಕರಿಸುವನು. ಸುಬ್ಬಣ್ಣನು ಮಂತ್ರಿಸಿದ ಹಾವಿನಂತೆ ಒಂದೇ ಸವನೆ—ಆಕೆ ಬಾಗಿಲಿನಿಂದ ನಡೆಯುತ್ತಾ ಸೋಫಾದ ಹಿಂದೆ ಬಂದು ಅಜ್ಜನ ಎರಡೂ ಭುಜಗಳ ಮೇಲೆ ಸಂತೈಸುವವರಂತೆ ಕೈಯಿಟ್ಟು ನಿಲ್ಲುವವರೆಗೆ-ಒಂದೇ ಸವನೆ-ಪಿಕಿಮಿಕಿ ಸುತ್ತಾನೆ. ]

**ಅಜ್ಜ** :— ( ಮಂದಾಕಿನಿಯ ಕೈಯನ್ನು ತನ್ನ ಕೈಯಿಂದ ತಟ್ಟುತ್ತ, ತನ್ನಷ್ಟಕ್ಕೆ ಎಂಬಂತಹ ದನಿಯಲ್ಲಿ ) ಯಾಕೆ ?—ಯಾಕೆ ? ( ಎಂದು ಕ್ರಮೇಣ ದನಿಯನ್ನಿಳಿಸುತ್ತ ವಟಗುಟ್ಟುತ್ತಾನೆ. )

**ಮಂದಾಕಿನಿ** :— ( ಅಜ್ಜನ ಹಿಂದೆ ನಿಂತಲ್ಲಿಂದಲೆ ಸುಬ್ಬಣ್ಣನನ್ನು ದಿಟ್ಟಿಸುತ್ತ ) ಅಂಥಾ ಪತ್ರ ಬರೆದದ್ದು ಯಾಕೆ ಅಂಬೋದನ್ನ ನಾನು

ಹೇಳಲಿಯಾ ?.... ಯಾಕೆ— ಅಂದ್ರೆ— ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದೆ—

**ಸುಬ್ಬಣ್ಣ** :— ( ಅತ್ಯಂತ ತಿರಸ್ಕಾರದಿಂದ ) ಛೆ ! ಅದರದೇನು ಸಂಬಂಧ ಇಲ್ಲಿ ?

**ಮಂದಾಕಿನಿ** :— ( ಅವನ ಕಡೆಗೆ ಲಕ್ಷ್ಯವಿಲ್ಲದೆ ) ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದೆ....ಮುಸಲ್ಮಾನರಿಗೆ ಪಾಕಿಸ್ತಾನ ಸಿಕ್ಕಿದೆ—

**ಸುಬ್ಬಣ್ಣ** :— ( ತಡೆಯದಂತಾಗಿ—ಛೆ !—ಎನ್ನುತ್ತ ಒಮ್ಮೆಲೆ ತಿರುಗಿ ಹಿಂದಿನ ಗೋಡೆಯ ಕಡೆಗೆ ನಡೆಯುವನು. ಮಂದಾಕಿನಿಯ ಮುಂದಿನ ಮಾತು ನಡೆದಾಗ ಕಿಟಕಿಗೆ ನಿಂತು ಹೊರಗೆ ನೋಡುತ್ತಿರುತ್ತಾನೆ. )

**ಮಂದಾಕಿನಿ** :— ( ಪಟದಿಂದ ಮುಂದೆ ಸಾಗುತ್ತ ) ಉಳಿದ ಮುಸಲ್ಮಾನರೂ ದೇಶಾಂತರ ಮಾಡುತ್ತಲಿದ್ದಾರೆ....ಅಂತೂ ಉಳಿಯಿತು ಹಿಂದುಗಳ ರಾಜ್ಯ....ಆರ್ಯ ಸಂಸ್ಕೃತಿಯ ರಾಜ್ಯ. ( ಒಮ್ಮೆ ಸುಬ್ಬಣ್ಣನನ್ನು ನೋಡಿ) ಆ ಸಂಸ್ಕೃತಿಗನುಸಾರವಾಗಿ ಗಂಡಸಿನ ನೆರಳಿನಂತಾಗುವ ಆರ್ಯ ಗೃಹಿಣಿ ಬೇಕಾಗಿದ್ದಾಳೆ—

**ಸುಬ್ಬಣ್ಣ** :— ( ಒಮ್ಮೆಲೆ ನಡೆದು ಬರುತ್ತ ಸಿಟ್ಟಿನ ದನಿಯಲ್ಲಿ ) ಸುಳ್ಳು ! ತಪ್ಪು ! ಅಪಪ್ರಚಾರ!....( ಒಮ್ಮೆಲೆ ತಡೆದು ) ನನ್ನದೆ ದುರ್ದೈವ!.... ( ಮತ್ತೆ ಕುರ್ಚಿಯ ಮುಂದೆ ಬಂದು ನಿಂತು ಅಜ್ಜನನ್ನು ಇದಿರಿಸಿ ) ಪಾಂಡಪ್ಪನವರೆ, ನಿಮ್ಮ ಮೊಮ್ಮಗಳ ವಿಚಾರ ಇಂಥವು ಅಂತ ಮೊದಲೇ ಗೊತ್ತಿದ್ರೆ ನಾನು ಈ ಮೋಸದಲ್ಲಿ ಬೀಳತಿದ್ದಿಲ್ಲ ಅಂದೆ.... ( ತನ್ನಷ್ಟಕ್ಕೆ ಎಂಬಂತೆ ) ಮೋಸ !

**ಮಂದಾಕಿನಿ** :— (ಕನಲಿ) " ಈ ವಿಚಾರ ಮೊದಲೇ ಗೊತ್ತಿದ್ದರೆ " ?.... ಆದ್ರೆ, ನನ್ನ ವಿಚಾರ ತಿಳಿದುಕೊಳ್ಳಲಿಕ್ಕೆ ನೀವು ಯಾವಾಗ ಪ್ರಯತ್ನ ಮಾಡಿದಿರಿ ?.... ( ತಿರಸ್ಕಾರದಿಂದ ) ನಿನ್ನೆ !....ಅದಕೂ ಮುಂಚಿನಿಂದಲೆ ಈ ಮಂದಾಕಿನಿ ಬೇಕಾಗಿದ್ದಳಲ್ಲ ನಿಮಗ ?.... ಮಂದಾಕಿನಿಯ ವಿಚಾರ ಗೊತ್ತಾದ ಮ್ಯಾಲೆ ಬ್ಯಾಡಾದಳು ಮಂದಾಕಿನಿ, ಅಲ್ಲವೆ ? ( ಅತ್ಯಂತ ತಿರಸ್ಕಾರದಿಂದ ) ಯಾಕಂದ್ರೆ, ನಿಮಗೆ ಬೇಕಾದದ್ದು ಮಂದಾಕಿನಿಯ ದೇಹ—

**ಸುಬ್ಬಣ್ಣ** :— ( ನಡುವೆಯೆ ಗಟ್ಟಿಯಾಗಿ ) ಸುಳ್ಳು—

**ಮಂದಾಕಿನಿ** :— ( ಅವನ ಕಡೆಗೆ ಲಕ್ಷ್ಯವಿಲ್ಲದೆ, ತಾನೂ ಎತ್ತರದ ದನಿಯಲ್ಲಿ ) —ನಿಮಗಾಗಿ ಯಂತ್ರದ ಹಾಗೆ ದುಡಿಯಲಿಕ್ಕೆ ಮಂದಾಕಿನಿಯ ದೇಹ, ಮಡಿದ ನಿಮ್ಮ ದಣಿವನ್ನು ತಣಿಸುವ ಯಂತ್ರ ಆಗ್ಬೇಕು ಮಂದಾಕಿನಿಯ ದೇಹ—

**ಸುಬ್ಬಣ್ಣ** :— ( ಹಟದಿಂದ ಮುಂದೆ ಬಂದು ) ಪಾಂಡಪ್ಪನೋರೆ, ಕೇಳಿದಿರಾ ಈ ವಿಚಾರ ?

**ಮಂದಾಕಿನಿ** :— ( ತನ್ನಷ್ಟಕ್ಕೆ ಎಂಬಂತೆ ) ಮಂದಾಕಿನಿಯ ದೇಹ ( ಎನ್ನುತ್ತ ಶೂನ್ಯದೃಷ್ಟಿಯಿಂದ ಮಂಚದ ಕಡೆಗೆ ನಡೆಯುವಳು )

**ಸುಬ್ಬಣ್ಣ** :—( ಸಿಟ್ಟಿನಿಂದ ) ಇಂಥಾ ವಿಚಾರ ಕೇಳಿದಿರೇನು, ಅಂದೆ!.... ( ತಿರಸ್ಕಾರದಿಂದ ) ನಿಮ್ಮ ವಾತ್ಸಲ್ಯ, ತಂದೆಯ ಪ್ರಭಾವ! ಅದರ ಪರಿಣಾಮ ಆದ್ರೆ, ಇಂಥಾ ವಿಚಾರಗಳ ವೈತರಣಿ—

**ಅಜ್ಜ** :— ( ನಡುವೆಯೆ ) ಹಾಂ—ಹಾಂ—ಹಾಂ! ಸುಬ್ಬಣ್ಣಾ, ಯಾರ ದೋಷ ಯಾರ ಮೇಲಾದರೂ ಹೊರಿಸ್ಬೇಡ....ಇದು ನಾವು ಕೊಟ್ಟ ಶಿಕ್ಷಣ ಅಲ್ಲ, ( ಹಟದಿಂದ ) ಇದು ನಿಂ ಗಾಂಧಿ ಚಳವಳದ ಪ್ರಭಾವ!....ಏನಂತಿ ? ಆಂ ?

**ಸುಬ್ಬಣ್ಣ** :— ( ಕುರ್ಚಿಯಲ್ಲಿ ಕುಕ್ಕರಿಸುತ್ತ ) ಇದು ನಂ ದೇಶದ ದುರ್ದೈವ!

**ಮಂದಾಕಿನಿ** :— ( ಮುಂದೆ ಬಂದು ) ನಿಜ....ಸಮಾಜ ಮುಂದಾಗದೆ ಸ್ವಾತಂತ್ರ್ಯ ಸಿಕ್ಕಿತು ಅನ್ನೋದು ನಂ ದೇಶದ ದುರ್ದೈವ....

**ಅಜ್ಜ** :— ಮುಂದೂ, ಮುಂದೂ, ನಂನಮ್ಮ ಹೊಟ್ಟೆಯೊಳಗಿನ ಸಂತಾಪ ದೇಶದ ಮ್ಯಾಲೆ ಹಾಕೋದು ಯಾಕೆ ? ಆಂ ?....( ಏಳುತ್ತ ) ಸಾಕು, ಸುಬ್ಬಣ್ಣಾ, ನಾನು ಕೇಳೋ ಪ್ರಶ್ನೆ ಯಾವಾಗಲೂ ಮುಗಿದುವು. ಹೊರಡಬಹುದು—ನೀನಿನ್ನು....ಆಂ ? ( ಎಡಗೈಯನ್ನು ಮಂದಾಕಿನಿಯ ಬೆನ್ನಮೇಲಿಟ್ಟು ) ಮುಂದೂ, ಸುಬ್ಬಣ್ಣ ಹೊರಡಬಹುದಲ್ಲ ? ಆಂ ?

**ಮಂದಾಕಿನಿ** :— ( ಕೆಳಗೆ ನೋಡುತ್ತ ) ನಾನು ಯಾವಾಗ ಯಾರನ್ನ ತಡೆದೀನಿ, ಅಜ್ಜ ?

**ಅಜ್ಜ** :— (ಚಕಿತನಾದವನಂತೆ) "ಯಾವಾಗ ಯಾರನ್ನ ತಡೆದೀದಿ?" ಆಂ? ಒಳ್ಳೇ ಪ್ರಶ್ನೆ! ಇದೇ ಮನೆಯೊಳಗ ಈ ಮುದುಕನ್ನ ತಡೆದೀದಿ—

**ಮಂದಾಕಿನಿ** :— (ಮುಖವನ್ನು ಮೇಲಕೆತ್ತಿ) ಅಜ್ಜ—

**ಅಜ್ಜ** :— (ಲಕ್ಷ್ಯವಿಲ್ಲದೆ) —ಸಾಯಬೇಕಾದ ಮುದಕನ್ನ ಜೀವ ಹಿಡಿಸಿ ತಡೆದೀವಿ ಮಂದೂ.... ಅಲ್ಲೇನು? ಆಂ?.... (ಶೂನ್ಯದೃಷ್ಟಿಯಿಂದ ಇದಿರು ನೋಡುತ್ತ) ಆದ್ರೆ, ಮುದುಕನಿಗಾಗಿ ನೀನು ತಡೀಬ್ಯಾಡ, ಮಂದೂ, ನೀನು ತಡೀಬಾರ್ದು

**ಮಂದಾಕಿನಿ** :— (ಕಾತರದಿಂದ) ಅಜ್ಜ, ಅಜ್ಜ, ಏನಿದು? ಎಂಥಾ ಮಾತು!

**ಅಜ್ಜ** .— ಸುಬ್ಬಣ್ಣಾ—

**ಸುಬ್ಬಣ್ಣ** :— (ಕೆಳಗೆ ನೋಡುತ್ತ) ನನ್ನ ಕ್ಷಮಿಸಬೇಕು ನಾನು— ನಾನು—

**ಅಜ್ಜ** :— (ನಡುವೆಯು ಮಂದಾಕಿನಿಯನ್ನು ಎಡಗೈಯಿಂದಲೆ ತಡವುತ್ತ ಆಕೆಯೊಡನೆ ಸೋಫಾದ ಕಡೆಗೆ ನಡೆಯುತ್ತ) ಸುಬ್ಬಣ್ಣಾ- ನೀವಿಬ್ಬರೂ- ಹಾಂಗ ಕೇಳಿದರೆ—ನನ್ನ ಕ್ಷಮಿಸಬೇಕು ಅಂತೀನಿ. ಏನಂತೀ? ಆಂ? ಹೌದಲ್ಲೊ, ಮಂದೂ?.. (ಮಂದಾಕಿನಿಗೆ) ನಡುವೆ ಮಾತಾಡ ಬೇಡ, ಹಿರಿಯರು ಮಾತಾಡುವಾಗ! (ಮುಗುಳ್ನಗೆಯಿಂದ) ನಿಂ ಜೀವನದೊಳಗ ನಾನು ಅಡ್ಡ ಬರ್‍ಬಾರದಾಗಿತ್ತು, ಮಂದೂ,— ಸುಬ್ಬಣ್ಣಾ, ಬುದ್ಧಿಪೂರ್ವಕ ನಾನು ಅಡ್ಡ ಬಂದಿಲ್ಲ.... (ನಕ್ಕು) ನಡುವೆ ನಿಂತದ್ದು ಅನಿಚ್ಛಿತ, ಅನಿವಾರ್ಯ; ನನ್ನನ್ನು ಬದಿಗೆ ಸರಿ ಸರಿ—(ಎನ್ನುತ್ತ ಸೋಫಾದಲ್ಲಿ ಕೂಡ್ರುವನು.)

[ಅಜ್ಜನು ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಕೂಡುವನು. ಒಂದು ನಿಮಿಷ ಸುಬ್ಬಣ್ಣನೂ ಮಂದಾಕಿನಿಯೂ ಭಾವ ಶೂನ್ಯದೃಷ್ಟಿಯಿಂದ ಒಬ್ಬರ ನ್ನೊಬ್ಬರು ನೋಡುವರು. ಮಂದಾಕಿನಿಯು ಕೂಡಲೆ (ಪ್ರೇಕ್ಷಕರಿಗೆ) ಇದಿರು ನೋಡುವಳು. ಸುಬ್ಬಣ್ಣನು ಏಳುವನು. ಇಬ್ಬರೂ ಪರಸ್ಪರ ಮುಖ ತಿರುಗಿಸಿ ನಿಲ್ಲುವರು. ಕೂಡಲೇ ಮೆಲ್ಲಗೆ ಹೆಜ್ಜೆಗಳನ್ನಿಡುತ್ತ ಮಂದಾಕಿನಿಯು ಮಂಚದ ಕಡೆಗೆ, ಸುಬ್ಬಣ್ಣನು ಬಾಗಿಲಕಡೆಗೆ ನಡೆಯುವರು. ಮಂದಾಕಿನಿ ಮಂಚದ ಹತ್ತಿರ

ಬಂದು ಇದಿರುಗೋಡೆಯನ್ನು ನೋಡುತ್ತ ನಿಲ್ಲುವಳು; ಸುಬ್ಬಣ್ಣನು ಬಾಗಿಲಿನ ಹತ್ತಿರ ನಿಂತು ಬಾಗಿಲಿನಿಂದ ಹೊರಗೆ ನೋಡುತ್ತ ನಿಲ್ಲುವನು. ಅಜ್ಜನು ಸಾವಕಾಶವಾಗಿ ಮುಚ್ಚಿದ ಕೈಗಳನ್ನು ತುಸು ಕೆಳಗೆ ಬಿಟ್ಟು ಮುಗಿವಂತೆ ಅವುಗಳನ್ನಿಟ್ಟು ಮೊದಲು ಮಂದಾಕಿನಿಯನ್ನೂ ಆ ಮೇಲೆ ಸುಬ್ಬಣ್ಣನನ್ನೂ ನೋಡುವನು. ವಿಷಾದದಿಂದ ತಲೆ ಅಲ್ಲಾಡಿಸುವನು, ಮೆಲ್ಲಗೆ ಏಳುವನು. ]

**ಅಜ್ಜ** :— (ನಿಂತು) ಮಂದೂ—

**ಮಂದಾಕಿನಿ** :— (ನಿಂತಲ್ಲಿಯೆ) ಅಜ್ಜ—

**ಅಜ್ಜ** :— ಅಂ—ಸುಬ್ಬಣ್ಣಾ—

**ಸುಬ್ಬಣ್ಣ** :— (ನಿಂತ ಹಾಗೆಯೆ) ಪಾಂಡಪ್ಪನವರೆ—

**ಅಜ್ಜ** :— (ಮುಗುಳ್ನಗೆಯಿಂದ) ನಿಂ ನಿಂ ಹೃದಯಗಳ ಜೋಡಿ ಏಕಾಂತ ಚರ್ಚೆ ಮುಗೀತೇನು ? ಅಂ ?....(ಇಬ್ಬರನ್ನೂ ನೋಡುವನು. ಇಬ್ಬರೂ ಸುಮ್ಮನಿರುವರು) ....ಚರ್ಚಾ ಮುಗೀತೇನು, ಅಂದೆ ?.... ಯಾವ ಗೊತ್ತುವಳಿ ಸ್ವೀಕೃತ ಆಯ್ತು—ಅಂ ?—ಅಂ—ಮಂದೂ ?

**ಮಂದಾಕಿನಿ** :— (ನಿಂತಹಾಗೆಯೆ) ಹೆಂಗಸಿನ ಸ್ಥಾನ ಗಂಡಸಿನ ಸಮಾನ ಅಲ್ಲ—

**ಅಜ್ಜ** :— (ನಡುವೆಯೆ ಬೆರಗಾದವನಂತೆ) ಅಂ ?

**ಮಂದಾಕಿನಿ** :— (ಹಾಗೇ ವಾಕ್ಯವನ್ನು ಮುಂದರಿಸುತ್ತ) ಗಂಡಸಿಗಿಂತ ಮೇಲಿನದು.

**ಅಜ್ಜ** :— ಹುಂ—(ಎಂದು ಉಸಿರೆಳೆದು) ವಕೀಲರ ನಿರ್ಣಯ ಏನು—? (ಎನ್ನುತ್ತ ಸುಬ್ಬಣ್ಣನ ಕಡೆಗೆ ಮುಖ ತಿರುಗಿಸುವನು.)

**ಸುಬ್ಬಣ್ಣ** :— (ನಿಂತ ಹಾಗೇ) ಸೃಷ್ಟಿಯ ನಿಯಮ ಇದೆ....ಹೆಂಗಸಿಗೆ ಮನೆ, ಗಂಡಸಿಗೆ ಸಮಾಜ....

**ಮಂದಾಕಿನಿ** :— (ನಿಂತಂತೆಯೆ) ಅದು ಹಳೆಯ ವಿಚಾರ; ಅದು ಹೋಗಲೇಬೇಕು.

**ಸುಬ್ಬಣ್ಣ** :— (ನಿಂತಂತೆಯೆ) ಇದು ಹೊಸ ಕಾಲ; ಆದರ ಪುನರುದ್ಧಾರ ಆಗ್ಬೇಕು.

**ಅಜ್ಜ** :— (ಮೇಲಿನ ಎರಡು ಮಾತುಗಳನ್ನು ಆಡುವವರನ್ನು ಒಬ್ಬೊಬ್ಬರಂತೆ ನೋಡಿ) ವಿಚಾರ ಹಳೆಯದು, ನನ್ನ ಹಾಗೆ. ಕಾಲ ಹೊಸದು,

ನಿಮ್ಮ ಹಾಗೆ....ಹಳೆಯದು, ಹೋಗಲೇ ಬೇಕು....ಆದ್ರೆ ಹ್ಯಾಗೆ ಹೋಗೋದು ? ಆಂ ?....ಹೋದ್ರೂ ಮತ್ತೆ ಮತ್ತೆ ಬರೋದೆ, ಸುಬ್ಬಣ್ಣ ಹೇಳಿಧಾಂಗ ; ಜರಾಸಂಧನ ಹಾಂಗ....ಆದ್ರೂ ಹೋಗ-ಬೇಕು ; ಜರಾಸಂಧನ ಹಾಗೇ ಹೋಗ್ಬೇಕು....ಎಡದ್ದು ಬಲಕ್ಕ, ಬಲದ್ದು ಎಡಕ್ಕ---ತಿರುವು-ಮುರುವು ಆಗ್ಬೇಕು....( ಒಮ್ಮೆಲೆ ನಿರ್ಣ-ಯಕ್ಕೆ ಬಂದವನಂತೆ ) ನಿಜ. ತಿರುವು-ಮುರುವೇ ಆಗಬೇಕು.... ( ಮೆಲ್ಲಗೆ ನಡೆಯುತ್ತ ಮಂದಾಕಿನಿಯ ಹತ್ತಿರ ಬಂದು, ಅವಳ ಮುಖ ತಿರುಗಿಸಿ ಇಬ್ಬರೂ ಸುಬ್ಬಣ್ಣನಿಗೆ ಇದಿರಾಗುವಂತೆ ನಿಂತು ) ಸುಬ್ಬಣ್ಣಾ--- ( ಅವನೂ ತಿರುಗಿ ನಿಲ್ಲುವನು ) ತಿರುವು-ಮುರುವು ಆಗ್ಬೇಕು, ಅಂದೆ.... ಹೆಂಗಸಿನ್ನ ಹೆಂಗಸು ಅಂತ ತಿಳೀಬಾರ್ದು, ಗಂಡಸಿನ್ನ ಗಂಡಸು ಅಂತ ತಿಳೀಬಾರ್ದು—ಆಂ ?—ತಿಳೀತೇನು ?—ನಾನು, ಬಿಂದು, ಮುಂದು. ಹಳೆಯದು ಹೊಸತು ಆಗ್ತಾ ನಡೆದಿದೆ....ನಾನು, ಬಿಂದು, ಮುಂದು ; ಹಳೆಯದರಲ್ಲಿ ಹೊಸತು ವ್ಯೆಗೂಡಿಸಿಕೊಂಡೇ ನಿಂತಿದೆ.... ಏನಂತೀ ? ಆಂ ?....**ಜರಾಸಂಧಿ**—ಇದು....( ಎನ್ನುತ್ತ ಮಂದಾಕಿನಿಯೊಡನೆ ಮುಂದೆ ನಡೆದುಬರುವನು. ಅವರನ್ನು ದಿಟ್ಟಿಸುತ್ತಲೆ ಸುಬ್ಬಣ್ಣನೂ ಅವರಿಗೆ ಇದಿರಾಗಿ ಬರುವನು. ) ಅನುಭವದ ಮುದುಕ ಅರಿಯದ ಹರೆಯದವರನ್ನ ಕೂಡಿಸೋ—

**ಜರಾಸಂಧಿ** ಇದು.

[ ನಡುವೆ ಅಜ್ಜ, ಎಡಕ್ಕೆ ಮಂದಾಕಿನಿ, ಬಲಕ್ಕೆ ಸುಬ್ಬಣ್ಣ ನಿಲ್ಲುವರು. ಅಜ್ಜನು ಇಬ್ಬರ ಬೆನ್ನು ತಟ್ಟಿ ನಿಂತಿದ್ದಾನೆ. ]

( ತೆರೆ )

## ಮೂರನೆಯ ಅಂಕ ಮುಗಿದುದು.

ನಾಟಕ ಮುಗಿದುದು

( ೯-೧೧-೧೯೪೭ )

